೧ ೨ ೨ ೩ ೪ ೫ ೧ ೨೦ ೦ ೧ ೨ ೧೦ ೨
ಯಾಸ್ತಾಽ೩ಃ । ಓಇ । ಧಿಯಸ್ತಾಃ । ಯಸ್ತಾ । ಔಹೋವಾ । ಏಹಿ
೦ ೦ ೦ ೦ ೧೦ ೨ ೨೦ ೦
ಯಾ ॥ ಹಾಉಹಾಉಹಾಉ । ಶೂರೋಽ೩೧೨೩ । ಹಾಉಹಾ
೦ ೦ ೦ ೧ ೨ ೧ ೨ ೧
ಉಹಾಉ । ನೃಷಾತಾಶ್ರವಸಶ್ಚಕಾಮಾಇ । ಚಕಾಮಾಇ । ಚಕಾ
೨ ೨ ೩ ೪೦ ೫ ೧೦ ೨೦ ೦ ೧ ೨ ೧೦ ೨
ಮಾಽ೩ಇ । ಓಇ । ಚಕಾಮಾಇ । ಕಾಮಾ । ಔಹೋವಾ । ಏಹಿ
೦ ೦ ೦ ೦ ೧೦ ೨ ೨೦ ೦
ಯಾ॥ ಹಾಉಹಾಉಹಾಉ । ಆಗೋಽ೩೧೨೩ । ಹಾಉಹಾಉ
೦ ೦ ೦ ೧ ೨ ೧ ೨ ೧ ೨
ಹಾಉ । ಮತಿವ್ರಜೇಭಜಾತುವಾನ್ನಃ । ತುವಾನ್ನಃ । ತುವಾನ್ನಾಽ
೨ ೩ ೪ ೫ ೧ ೨೦ ೦ ೧ ೨ ೧೦ ೨ ೦
೩ಃ । ಓಇ । ತುವನ್ನಾಃ । ವನ್ನಾ । ಔಹೋವಾ । ಏಹಿಯಾ ।
೧೧೧
ಹಾಉಹಾಉಹಾಉ । ವಾಽ೩ । ಈಽ೨೩೪೫ ॥

*ದೀ – ೫೩ । ಪ – ೪೭ । ಮಾ – ೪೮ । ತ್ರೈ ॥ ೧.೧೮೭ ॥*

ಈ ೧೮೭ನೆಯ ಗಾನವು ಇನ್ದ್ರನ್ನರೋನೇಮಧಿತ ೩೧೮ನೆಯ ಋಕ್ ಮೇಲೆ ಅಧಿಷ್ಠಿತವಾಗಿದೆ.

೧೨೦ ೧೨೦ ೧೨೦ ೧೨೦ ೩ ೨ ೩ ೨
ಸ್ತೋಭ ಪದಪಾಠ – ಸಹಸ್ವಾನ್–ಸಹಸಃ–ಪತಿಃ–ಅದಿದ್ಯವತ್–ಸ್ವರ್ಜಿತ್–ಸ್ವಃ–ಜಿತ್–
೩ ೦ ೨ ೩ ೧ ೨೦ ೧೨೦
ವಾಜಸಾತಮಃ–ವಾಜ–ಸಾತಮಃ–ಅದಿದ್ಯವಮ್ । ಸಾಮ ೧೮೮ ॥

೨೦ ೦ ೦ ೧ ೨ ೧ ೨
೧೮೮.೧. ಹಾಉಹಾಉಹಾಉ । ಹಾಹಾಉ । ೩ । ಇಹಾಹಾಉ ।
೧ ೨ ನ ೨ ೧ ೦ ೨೦
೩ । ಇಯಾಹಾಉ । ೨ । ಇಯಾಽ೩ಹಾಉ । ವಾ । ಅಭಿತ್ವಾಶೂ
೦ ೦ ೧ ೨ ೦ ೦ ೧ ೦ ೦ ೦ ೨
ರನೋನುಮೋಹಸ್ ॥ ಅದುಗ್ಧಾಇವಧೇನವೋಹಸ್ । ಈಶಾನಮ
೧ ೨ ೧ ೦ ೦ ೨ ೧ ೦
ಸ್ಯಜಗತಃಸ್ವರ್ದೃಶꣳಹಸ್ । ಈಶಾನಮಿನ್ದ್ರತಸ್ಥುಷೋಹಸ್ ॥ ಸಹ

೨೧ ೧ ೨೧೨೧ ೨ ೧ ೨೧ ೦ ೨೧೦೨ ೧೦ ೨ ೧
ಸ್ವಾನ್ತ್ಸಹಸಸ್ಪತಿರದಿದ್ಯವದ್ಧಸ್ ॥ ಸ್ವರ್ಜಿದ್ವಾಜಸಾತಮೋದಿದ್ಯವದ್ಧ
೨೦ ೦ ೦ ೧ ೨ ೧ ೨
ಸ್ । ಹಾಉಹಾಉಹಾಉ । ಹಾಹಾಉ । ೩ । ಇಹಾಹಾಉ ।
೧ ೨ ೧ ನ ೨ ೧ ೦
೩ । ಇಯಾಹಾಉ । ೨ । ಇಯಾಽ೩ಹಾಉ । ವಾ ॥ ಇಡಾ
೦
ಹಸ್ ಸ್ಥಿ ಹಸ್ ಸ್ಥಿ ಇಡಾ । ೩ ॥

*ದೀ – ೨೮ । ಪ – ೩೧ । ಮಾ – ೩೭ । ಟೇ ॥ ೨.೧೮೮ ॥*

ಈ ೧೮೮ನೆಯ ಗಾನವು ಅಭಿತ್ವಾಶೂರನೋನುಮಃ ೨೩೩ನೆಯ ಋಕ್ ಮೇಲೆ ಅಧಿಷ್ಠಿತವಾಗಿದೆ.

## ಋಕ್ – ೬೦೭

॥ ಗೃತ್ಸಮದಃ ಶೌನಕಃ ತ್ರಿಷ್ಟುಪ್ ಅಪಾಂನಪಾತ್ ॥

೨ ೩ ೧ ೨೦ ೩ ೧ ೨ ೩ ೨ ೩ ೨ ೩ ೨೦
ಸಮನ್ಯಾ ಯನ್ತ್ಯುಪ ಯನ್ತ್ಯನ್ಯಾಃ ಸಮಾನಮೂರ್ವಂ ನದ್ಯಸ್ಪೃಣನ್ತಿ ।
೨ ೩ ೨ ೩ ೧ ೨ ೩ ೧ ೨ ೩ ೧ ೨೦ ೩ ೧
ತಮೂ ಶುಚಿ೮\ ಶುಚಯೋ ದೀದಿವಾ೮\ಸಮ್ ಅಪಾಂನಪಾತಮು
೨ ೩ ೧ ೨
ಪ ಯನ್ತ್ಯಾಪಃ ॥ ೬-೬೦೭ ॥

೨ ೩ ೨ ೩ ೨ ೧ ೨೦ ೧ ೨೦ ೩ ೨ ೩ ೨
ಸಮ್–ಅನ್ಯಾಃ–ಅನ್–ಯಾಃ–ಯನ್ತಿ–ಉಪ–ಯನ್ತಿ–ಅನ್ಯಾಃ–ಅನ್– ಯಾಃ ।
೩ ೨ ೩ ೨ ೩ ೨ ೩ಕ೨ ೩ ೨ ೩
ಸಮಾನಮ್–ಸಮ್–ಆನಮ್–ಊರ್ವಮ್–ನದ್ಯಃ–ಪೃಣನ್ತಿ ॥ ತಮ್–ಉ–
೧ ೨೦ ೧ ೨೦ ೩ ೧ ೨ ೩ ೨ ೧ ೨೦ ೧ ೨೦
ಶುಚಿಮ್–ಶುಚಯಃ–ದೀದಿವಾ೮\ಸಮ್ । ಅಪಾಮ್–ನಪಾತಮ್–ಉಪ–
೩ ೧ ೨೦
ಯನ್ತಿ–ಆಪಃ ॥ ೬-೬೦೭ ॥

೧ ೨೦ ೩ ೨ ೧ ೨೦ ೩ ೨ ೧ ೨೦ ೩
ಸ್ತೋಭ ಪದಪಾಠ – ಐರಯತ್–ಅಪಃ–ಸಂ–ಐರಯತ್–ಭೂತಮ್–ಐರಯತ್–ಅ

೨ ೧೨೦ ೩೨ ೧೨೦ ೩ ೨ ೧೨೦ ೩೨ ೧೨೦ ೩೨ ೩ ೨ ೩
ಪಾಮ್–ಗರ್ಭಃ–ಅಗ್ನಿಃ–ಇಡಾ–ಪೃಥಿವ್ಯಾಃ – ಗರ್ಭಃ–ಅಗ್ನಿಃ–ಇಡಾ–ಅಗ್ನಿಃ–ಶಿಶುಕ್ವಃ–ಶಿ
೨ ೩೨ ೩ ೨ ೩ ೨ ೧೨೦ ೩೧೨ ೩೨ ೧೨೦ ೩೨ ೩ ೨ ೧
–ಶುಕ್ವಃ–ಶುಕ್ರಃ–ಶಿಶುಕ್ವಃ–ಶಿ–ಶುಕ್ವಃ–ತೇಜಃ–ಶಕ್ರಸ್ಯ–ಶಕ್ವಂ–ತೇಜಃ – ಸಪ್ರಾಃ–ಸ–ಪ್ರಾಃ–ಸ
೨೦ ೩ ೧೨೦ ೧೨೦ ೩೨
ಮೀಚೀಃ–ಸಂ–ಈಚೀಃ–ತೇಜಃ–ಉಷಃ–ನ–ಜಾರಃ ॥ ೧೮೯ ॥

॥ ಅಪಾಂ ವ್ರತೇ ದ್ವೇ । ಆಪೋ ವಿರಾಡಿನ್ದ್ರ ಆಪಸ್ತ್ರಿಷ್ಟುಬಾಪಃ ॥

೨೦ ೦ ೦ ೧೦ ೨ ೧ ೦
೧೮೯.೧. ಹಾಉಹಾಉಹಾಉ । ಐರಯತ್ । ೩ । ಅಪಸ್ಸಮ್ಮೈರ
೨ ೦ ೧ ೦ ೨ ೦ ೦ ೦
ಯತ್ । ೩ । ಭೂತಮ್ಮೈರಯತ್ । ೩। ಅಪಾಙ್ಗರ್ಭೋಗ್ನಿರಿಡಾ ।
೦ ೦ ೦ ೦ ೦ ೦ ೧
ಪಾಙ್ಗರ್ಭೋಗ್ನಿರಿಡಾ । ೨ । ಪೃಥಿವ್ಯಾಗರ್ಭೋಗ್ನಿರಿಡಾ । ೩ । ಸ
೦ ೨ ೧ ೨ ೦ ೧ ೦ ೨
ಮನ್ಯಾಯನ್ತ್ಯುಪಯನ್ತಿಯಾಽ೨೩ನ್ಯಾಃ ॥ ಸಮಾನಮೂರ್ವನ್ನದ್ಯಸ್ಪೃ
೧ ೨ ೧೦ ೦ ೦ ೨ ೧ ೨
ಣಾಽ೨೩ಂನ್ತೀ ॥ ತಮೂಶುಚಿಂಶುಚಯೋದೀದಿವಾಽ೨೩ಂಸಾ
೧೦ ೦ ೨ ೧ ೨ ೨೦ ೦
ಮ್ ॥ ಅಪಾನ್ನಪಾತಮುಪಯನ್ತಿಯಾಽ೨೩ಪಾಽ೩ಃ । ಹಾಉಹಾ
೦ ೧೦ ೨ ೧ ೦ ೨ ೦ ೧
ಉಹಾಉ । ಐರಯತ್ । ೩ । ಅಪಸ್ಸಮ್ಮೈರಯತ್ । ೩ । ಭೂತ
೦ ೨ ೦ ೦ ೦ ೦ ೦
ಮ್ಮೈರಯತ್ । ೩ । ಅಪಾಙ್ಗರ್ಭೋಗ್ನಿರಿಡಾ । ಪಾಙ್ಗರ್ಭೋಗ್ನಿ
೦ ೦ ೦ ೦ ೦ ೦
ರಿಡಾ । ೨ । ಪೃಥಿವ್ಯಾಗರ್ಭೋಗ್ನಿರಿಡಾ । ೨ । ಪೃಥಿವ್ಯಾಗರ್ಭೋ
೦ ೨ ೦ ೧ ೨೧ ೨೦ ೧ ೨೧
ಗ್ನಿರಿಡಾಽ೩ । ಹಾಉವಾ ॥ ಏ । ಅಗ್ನಿಽಶಿಶುಕ್ವಃ । ಏ । ಶುಕ್ರಽಶಿಶುಕ್ವಃ ।
೨೦ ೧೦ ೨೧ ೨೧ ೨೦ ೧೦ ೨೧೦ ೦ ೨೦ ೦
ಏ । ತೇಜಃಶಕ್ರಸ್ಯಶಕ್ವಮ್ । ಏ । ತೇಜಃಸಪ್ರಾಸ್ಸಮೀಚೀಃ । ಏ ।
೧೦ ೨ ೧ ೨೦ ೧ ೨೦ ೧ ೨೦ ೧ ೦ ೩ ೧ ೧ ೧
ತೇಜಉಷೋನಜಾರಃ । ಏ । ಸುವರ್ಜ್ಯೋತೀಽ೨೩೪೫ಃ ॥

*ದೀ – ೮೮ । ಪ – ೪೯ । ಮಾ – ೩೫ । ಧು ॥ ೩.೧೮೯ ॥*

ಸ್ತೋಭ ಪದಪಾಠ – ಐರಯನ್–ಸಂ–ಐರಯನ್–ಸಂ–ಅಸ್ವರನ್ ॥

**೧೮೯.೨. ಹಾಉಹಾಉಹಾಉ । ಐರಯನ್ । ಇ । ಸಮ್ಮೈರಯನ್ । ಇ । ಸಮಸ್ವರನ್ । ಇ । ಸಮನ್ಯಾಯನ್ತ್ಯುಪಯನ್ತಿಯಾಽ೨ಇನ್ಯಾಃ ॥ ಸಮಾನಮೂರ್ವನ್ನದ್ಯಸ್ಪೃಣಾಽ೨ಇನ್ತೀ ॥ ತಮೂಶುಚಿ೪ಶುಚಯೋದೀದಿವಾಽ೨ಇ೪ಸಾಮ್ ॥ ಅಪಾನ್ನಪಾತಮುಪಯನ್ತಿಯಾಽ೨ಇಪಾಽಇಃ । ಹಾಉಹಾಉಹಾಉ । ಐರಯನ್ । ಇ । ಸಮ್ಮೈರಯನ್ । ಇ । ಸಮಸ್ವರನ್ । ೨ । ಸಮಸ್ವರಾಽಇನ್ । ಹಾಉವಾಽಇ ॥ ಈಽ೨ಇಳಾ ॥**

*ದೀ – ೨೬ । ಪ – ೨೬ । ಮಾ – ೨೮ । ಕ್ರೈ ॥ ೪.೧೯೦ ॥*

ಸ್ತೋಭ ಭಾಷ್ಯ – ಆಪಃ ಅನ್ಯಾಃ ಸಂಯನ್ತಿ ಆಹುತಿರಸೇನ ಸಮುದ್ರೋದಕೇನ ಚ ಮಿಶ್ರೀಭೂತಾಗಚ್ಛನ್ತಿ । ಅನ್ಯಾಃ ನದ್ಯಃ ಅಪಯನ್ತಿ ಅಮಿಶ್ರೀ ಭೂತಾಃ ಸಹಗಚ್ಛನ್ತಿ । ಸಮಾನಂ ಸಾಧಾರಣಂ ಊರ್ವಂ ವಿಸ್ತೀರ್ಣಂ ಅನ್ತರಿಕ್ಷಂ ಸಮುದ್ರಂ ಚ ಪೃಣನ್ತಿ ಪೂರಯನ್ತಿ । ತಂ ಸೂರ್ಯಮಗ್ನಿಂ ವಾ ಶುಚಿಂ ದೀಪ್ತಿಂ ದೀದಿವಾಂಸಂ ಅತಿಶಯೇನದೀಪ್ಯಮಾನಂ ಅಪನಪಾತಂ – ಅಪತ್ಯಭೂತಂ ಉಪಯನ್ತಿ ಸ್ಥಿತಿಂ ಕಾರಯನ್ತಿ । ಸಚ ಸೋಮ ಅಪಾಂ ಪೃಥಿವ್ಯಾಶ್ಚ ಗರ್ಭ ಭೂತೋಽಗ್ನಿಃ ಆಹುತಿವೃಷ್ಟಿದ್ವಾರೇಣ ಪುನರಪಃ ಸಮ್ಮೈರಯತ್ ಪ್ರೇರಯತಿ । ಅತೋಽಗ್ನಿರ್ಭೋಕ್ತಾ ಶುಕ್ರಶ್ಚ ಸೋಮೋ ಭೋಗ್ಯಃ । ಶಿಶುಕ್ವಃ ಶಿಶೋಃ ಚಿತ್ಪ್ರಕಾಶಸ್ಯ ನಿಮಿತ್ತಂ ಶುಕ್ರಸ್ಯ ಇನ್ದ್ರಸ್ಯ ತೇಜಃ ಶಕ್ವಂ ಶಕ್ತಂ ಅಗ್ನೀಷೋಮೌ ಏಷ ಏವ ತಥಾ ತೇಜಃ ಸೌರಂ ಸಪ್ರಾಃ ಸರ್ವತ್ರ ಪೂರಕಂ ಸಮೀಚೀಃ ಸಮ್ಯಕ್ ಪ್ರವರ್ತಮಾನಮ್ । ಉಷೋನ ಉಷಸೋ ಜಾರಮಿವ ಜರಯಿತಾರಂ ಮಹತ್ವಾತ್ ಪ್ರಕಾಶಾನ್ತರಾಣಾಂ ಸ್ಥಗಯಿತಾರಂ ಅಗ್ನಿಸೋಮ ಜನ್ಯಮೇವ ಸ್ವರ್ಜ್ಯೋತಿಶ್ಚ ತಾವೇವೇತ್ಯರ್ಥಃ । ಪುನಶ್ಚ ಆಪೋಽಗ್ನ್ಯಾದಿಕಂ ಭೋಕ್ತಾರಂ ಸಮ್ಮೈರಯನ್ ಪ್ರೇರಯನ್ತಿ । ಸಮಸ್ವರನ್ ಸಂಗತಾಶ್ಚ ಗಚ್ಛನ್ತೀತ್ಯರ್ಥಃ ॥

ಯಜ್ಞಮಾಡಿ ಅರ್ಪಿಸಿದ ಸೋಮಾದಿ ಹವಿರ್ದ್ರವ್ಯಗಳು ಸಮುದ್ರಾದಿ ಉದಕಗಳೊಂದಿಗೆ ಬೆರತು ಮೇಘವಾಗಿ ಮಳೆಯಾಗಿ ಕೆಲವು ಸಮುದ್ರದೊಂದಿಗೆ

ಸೇರುತ್ತವೆ. ಕೆಲವು ನದಿಯಾಗಿ ಬೇರೆಯಾಗಿಯೇ ಹರಿಯುತ್ತವೆ. ಈ ನೀರು ವಿಸ್ತಾರವಾದ ಭೂಮಿ ಸಮುದ್ರ ಅಂತರಿಕ್ಷಗಳಲ್ಲಿ ವ್ಯಾಪಕವಾಗಿ ಹರಡಿದ್ದು ಅಗ್ನಿ ಸೂರ್ಯರ ಅತಿಶಯವಾದ ತೇಜಸ್ಸಿನಿಂದ ಶುದ್ಧಿಗೊಂಡು ಜಗತ್ತಿನ ಸ್ಥಿತಿಗೆ ಕಾರಣವಾಗಿರುತ್ತದೆ. ಭೂಮಿ ಮತ್ತು ನೀರಿನ ಗರ್ಭದಲ್ಲಿ ಅಂತಸ್ಥವಾಗಿರುವ ಅಗ್ನಿಷ್ಟೋಮಯಜ್ಞದ ಆಹುತಿಗಳಿಂದ ಪ್ರೇರಿತವಾಗಿ ವೃಷ್ಟಿಯಮೂಲಕ ನೀರನ್ನುಂಟು ಮಾಡಿ ಭೋಕ್ತೃ ಭೋಗ್ಯವಾಗಿ ಎಲ್ಲರಿಂದಲೂ ಸೇವಿಸಲ್ಪಡುತ್ತಿರುತ್ತದೆ. ಆರಂಭದಲ್ಲಿ ಪುಟ್ಟದಾಗಿರುವ ಚಿತ್ರಕಾಶದ ನಿಮಿತ್ತವಾಗಿ ಇನ್ದ್ರನ ತೇಜಸ್ಸು ಅಗ್ನಿಷೋಮಾತ್ಮಕವಾಗಿ ಉಷಸ್ಸನ್ನು ಪ್ರಕಾಶಿಸುತ್ತಾ ಸೂರ್ಯನ ದಿವ್ಯತೇಜಸ್ಸಾಗಿ ಇಡೀ ಜಗತ್ತನ್ನು ಪ್ರೇರಿಸುತ್ತಾ ಸರ್ವತ್ರಪ್ರಸರಿಸಿ ಸೃಷ್ಟಿಚಕ್ರವನ್ನು ನಿಯಮದಂತೆ ಚಲಿಸುತ್ತಿರುತ್ತದೆ.

**ಸಾಯಣ ಭಾಷ್ಯ** – **ಅನ್ಯಾಃ** ವರ್ಷಾಣಾಮ್ **ಆಪಃ ಸಂ ಯನ್ತಿ** । ಭೂಮ್ಯಾಂ ಸಙ್ಗಚ್ಛನ್ತೇ । **ಅನ್ಯಾಶ್ಚ** ಪೂರ್ವಂ ತತ್ರಾವಸ್ಥಿತಾಃ **ಉಪಯನ್ತಿ** ಉಪಗಚ್ಛನ್ತಿ । ತಾಃ ಸರ್ವಾಃ ಆಪಃ **ಸಮಾನಂ** ಸಹ **ನದ್ಯಃ** ನದೀಭೂತ್ವಾ **ಊರ್ವಂ** ಸಮುದ್ರಮಧ್ಯೇ ವರ್ತಮಾನಂ ಬಡವಾನಲಂ **ಪೃಣನ್ತಿ** ಪ್ರೀಣಯನ್ತಿ । ಪೃಣಪ್ರೀಣನೇ –ಪ.ತೌದಾದಿಕಃ । **ತಮು** ತಮೇವ । **ಅಪಾಂ ನಪಾತಂ ಶುಚಿಂ** ನಿರ್ಮಲಂ **ದೀದಿವಾಂಸಂ** ದೀಪ್ಯಮಾನಮ್ । ದೀದಿವೇತಿ ಛಾನ್ದಸೋ ದೀಪ್ತಿಕರ್ಮಾಲಿಟಃ ಕ್ವಸುಃ । ವಸ್ವೇಕಾಜಾದ್‌ಘಸಾಮಿತಿ ನಿಯಮಾತ್ ಇಡಭಾವಃ । ಛನ್ದಸೀ ವೇತಿ ವಕ್ತವ್ಯಮಿತಿ ವಚನಾತ್ ಪಾ. ೭–೨–೬೭ ॥ ವಾರ್ತಿಕ.ಪಾ. ೬–೧–೭ ॥ ದ್ವಿರ್ವಚನಾಭಾವಃ । ಏವಂ ಭೂತಂ **ಶುಚಯಃ** ಶುದ್ಧಾಃ **ಆಪಃ ಉಪಯನ್ತಿ** ಸಮೀಪೇ ಗಚ್ಛನ್ತಿ॥

ಏಷ ಹಿ ವೈದ್ಯುತಾಗ್ನಿರೂಪೇಣ ಮೇಘೇ ವರ್ತಮಾನೋಽಸ್ಮಾನ್ ಅಜೀಜನದಿತಿ ಬುದ್ಧ್ಯಾ ಬಡವಾನಲರೂಪೇಣ ವರ್ತಮಾನಂ ತಂ ಪರ್ಯುಪಾಸತ ಇತ್ಯರ್ಥಃ। ಯದ್ವಾ ಅನ್ಯಾ ಏಕದ್ಧ್ಯನಾಖ್ಯಾ ಆಪಃ ಸಂ ಯನ್ತಿ । ಚಾತ್ವಾಲೋತ್ಕರಯೋರ್ಮಧ್ಯೇ ವಸತೀವರೀಭಿಃ ಸಙ್ಗಚ್ಛನ್ತೇ । ಅನ್ಯಾ ವಸತೀವರ್ಯಾಖ್ಯಾ ಆಪಶ್ಚ ಉಪಯನ್ತಿ ಉಪ ಗಚ್ಛನ್ತಿ ಏಕಮತ್ಯಂ ಪ್ರಾಪ್ತಾ ಭವನ್ತಿ । ಏತಾಶ್ಚ ಮಿಲಿತ್ವಾ ಯಜ್ಞಂ ಸಾಧಯನ್ತ್ಯಃ ತತ್ಸಾಧ್ಯವೃಷ್ಟಿದ್ವಾರಾ ನದ್ಯೋ ಭೂತ್ವಾ **ಊರ್ವಂ** ಪೃಣನ್ತೀತ್ಯಾದಿ ಸಮಾನಮ್ । ಏವಂ ಹಿ ಆಪೋ ವಾ ಅಸ್ಪರ್ಧನ್ತ ವಯಂ ಪೂರ್ವಂ ಯಜ್ಞಂ ವಕ್ಷ್ಯಾಮಃ ಇತ್ಯಾದಿಕೋ ಬಹ್ವೃಚ – ಐ.ಬ್ರಾ ೨.೨೦ ॥ ವಿನಿಯೋಗಶ್ಚಾನುಗೃಹ್ಯತೇ ॥ ಅಪಾನ್ನಪಾತ ಮುಪಯನ್ತ್ಯಾಪಃ–ಪರಿತಸ್ಥುರಾಪಃ । ಇತಿ ಸಾಮ್ನ ಋಚಃ ಪಾಠಭೇದಃ ॥

**ಅನ್ಯಾಃ ಸಂ ಯನ್ತಿ** ಮಳೆಯಾಗಿ ಬಿದ್ದ ನೀರು ಭೂಮಿಯನ್ನು ಸೇರುತ್ತದೆ **ಅನ್ಯಾಃ ಉಪಯನ್ತಿ** ಭೂಮಿಯಲ್ಲಿ ಮೊದಲೇ ಇದ್ದ ನೀರು ಈ ಮಳೆಯ ನೀರಿನೊಂದಿಗೆ ಸೇರಿಕೊಳ್ಳುತ್ತವೆ. **ಸಮಾನಂ** ಒಟ್ಟಾದ ಈ ಎಲ್ಲಾ ನೀರೂ ಕಲೆತು **ನದ್ಯಃ** ನದೀರೂಪವಾಗಿ **ಊರ್ವಂ** ಆಶ್ರಯರೂಪವಾಗಿ ಅಥವಾ ಆಚ್ಛಾದನರೂಪವಾಗಿ ಸ್ವೀಕರಿಸುವ ಮಹಾನದವಾದ ಸಮುದ್ರವನ್ನು ಅದರಲ್ಲಿರುವ ಬಡಬಾನಲವನ್ನು – ಊರ್ವೀ ಉರ್ವ್ಯಃ ನದೀನಾಮ್ ನಿಘಂ ೧–೧೩ । ಉರ್ವೀ ಊರ್ಣೋತಿ ವೃಣೋ

ತೇರಿತ್ಯೌಪಮನ್ಯವಃ ನಿರು ೨-೨೭ ॥ **ಪೃಣನ್ತಿ** ತೃಪ್ತಿಪಡಿಸುತ್ತವೆ. **ಶುಚಿಂ** ನಿರ್ಮಲನೂ ಪವಿತ್ರನೂ **ದೀದಿವಾಂಸಂ** ದೇದೀಪ್ಯನೂ ಪ್ರಕಾಶಮಾನನೂ ಆದ **ಅಪಾಂ ನಪಾತಮ್** ನೀರುಗಳ ಪೌತ್ರನಾದ ಅಗ್ನಿಯನ್ನು **ಅಪಾಂ ನ ಪಾತಮ್** ನೀರು ಮಳೆಯಾಗಿ ಕೆಳಕ್ಕೆ ಬೀಳದಂತೆ ಹಿಡಿದಿಟ್ಟುಕೊಂಡಿರುವ ಮೇಘಗಳನ್ನು **ಆಪಃ ಉಪಯನ್ತಿ** ನೀರುಗಳು ಸುತ್ತಲೂ ಸಮೀಪಿಸಿ ಆವರಿಸುತ್ತವೆ. ಮಳೆಯಿಂದ ಬಿದ್ದ ನೀರು ಭೂಮಿಯಲ್ಲಿ ಮೊದಲಿನಿಂದಲೂ ಇದ್ದ ನೀರು ಒಟ್ಟಿಗೆ ನದೀ ರೂಪದಲ್ಲಿ ಸಮುದ್ರವನ್ನು ಸೇರಿ ಅಲ್ಲಿರುವ ನದಿಗಳ ಪೌತ್ರನಾದ ಅಪಾಂ ನಪಾತಮ್ ಎಂಬ ಹೆಸರಿನ ಅಗ್ನಿಯನ್ನು ಸಮೀಪಿಸಿ ಸುತ್ತಲೂ ಆವರಿಸಿ ಸಂತೋಷಪಡಿಸುತ್ತವೆ.

ವೈದ್ಯುತಾಗ್ನಿಯ ರೂಪವಾದ ಮೇಘದಲ್ಲಿರುವ ಈ ಅಪಾಂ ನ ಪಾತ್ ದೇವನು ಉದಕರೂಪದಿಂದ ನಮ್ಮನ್ನು ಸೃಷ್ಟಿಸಿದನು ಎಂಬ ತಿಳುವಳಿಕೆಯಿಂದಾಗಿ ಸಮುದ್ರದ ಮಧ್ಯದಲ್ಲಿ ಬಡಬಾಗ್ನಿರೂಪದಿಂದಿರುವ ಈ ದೇವನನ್ನೇ ಸಮೀಪಿಸಿ ಆತ್ಮೀಯತೆಯಿಂದ ಈ ಉದಕಗಳು ಸುತ್ತುವರೆದಿವೆ. ಯಜ್ಞಕರ್ಮದಲ್ಲಿ ಏಕಧನವೆಂಬ ಹೆಸರಿನ ಉದಕ ಹರಿಯುತ್ತಾ ಯಾಗಶಾಲೆಯಲ್ಲಿನ ಚಾತ್ವಾಲ ಎಂಬ ಪ್ರದೇಶಕ್ಕೂ ಉತ್ಕರವೆಂಬ ಪ್ರದೇಶಕ್ಕೂ ಮಧ್ಯೆ ಇರುವ ವಸತೀವರೀ ಆದಿ ಬೇರೆ ಬೇರೆ ಉದಕಗಳೊಡನೆ ಸೇರಿ ಯಜ್ಞಕರ್ಮವು ಸಾಂಗವಾಗಿ ನೆರವೇರುವಂತೆ ಮಾಡುತ್ತವೆ. ಈ ಯಜ್ಞದಿಂದ ಸಾಧಿಸಬೇಕಾದ ಆಶಯದಂತೆ ಫಲ ರೂಪವಾದ ಮಳೆಯಾಗಿ ಲೋಕಕ್ಕೆ ಸುಭಿಕ್ಷವಾಗಿ ನಂತರ ನದಿಯಾಗಿ ಸಮುದ್ರವನ್ನು ಸೇರುತ್ತದೆ.

*ಎಂತು ಮಳೆನೀರಿಳೆಯೊಳಿಳಿದು ನದಿಯಂ ಸೇರುತುಂ*
*ನದಿಯೆ ಕಡಲಾಗಿ ಮುಂಬರಿವುದೋ ಮತ್ತಮಲ್ಲಿ ।*
*ಬಡಬಾಗ್ನಿ ನಲಿವಿಂದುದಿಸಿ ನೀರನಿದನೆತ್ತುತುಂ*
*ಬಾನ್ಗಡರಿಪುದೊ ಅಂತೆ ಸೋಮನುದಕಮನಡರುವಂ ॥*

೨ ೩೨ ೩ ೨ ೧೨೦ ೩ ೧೨೦ ೧೨೦
ಸ್ತೋಭ ಪದಪಾಠ – ಪ್ರಾಕ್–ಅನ್ಯತ್–ಅನ್–ಯತ್–ಅನು–ವರ್ತೇರ್ತ–ರಜಃ–ಅಪಾಕ್–
೧೨೦ ೩ ೨ ೩ ೨ ೧೨೦ ೧೨೦ ೩ ೧ ೨ ೧೨೦ ೩
ಅಪ–ಅಕ್–ಅನ್ಯತ್–ಅನ್–ಯತ್–ತಮಃ – ಅಪ–ಈಷತಿ–ಭ್ಯಸಾ–ಅರೂರುಚತ್–ಘ
೨ ೩ ೧ ೨ ೩೨ ೧ ೨೦ ೩
ರ್ಮಃ –ಅರೂರುಚಾತ್–ಉಷಸಾತ್–ದಿವಿ–ಸೂರ್ಯಃ–ವಿ–ಭಾತಿ ॥

॥ ಅಹವ್ರ್ರತಮ್ । ಅಹಗ್ರಾಯತ್ರೀಸೂರ್ಯಃ ॥

೨ ೧೦ ೨ ೦ ೧ ೦
## ೧೧೦.೧. ಹಾಉಹಾಉಹಾಉವಾ। ಪ್ರಾಗನ್ಯದನುವರ್ತತೇರಜೋ

೦ ೧ ೨ ೨ ೧೦

ಇಜ್ಞಾತಽ೩ವಾ೩ದಾಽ೧ಸಾಽ೨೩ಮ್ ॥ ಹಾಉಹಾಉಹಾಉವಾ । ಪ್ರಾ

೨ ೦೧೦ ೦೨೧ ೦ ೦೨ ೧೦ ೨೦

ಗನ್ಯದನುವರ್ತತೇೕರಜೋೕಪಾಗನ್ಯತ್ತಮೋೕಪೇಷತಿಭ್ಯಸಾ । ಹಾಉ

೦ ೦ ೦ ೧ ೨ ೨

ಹಾಉಹಾಉ । ದೇವಂವಹನ್ತಿಽ೩ಕಾ೩ತಾಽ೧ವಾಽ೨೩ಃ ॥ ಹಾಉ

೧೦ ೨ ೦೧೦ ೦೧ ೦

ಹಾಉಹಾಉವಾ । ಪ್ರಾಗನ್ಯದನುವರ್ತತೇೕರಜೋೕಪಾಗನ್ಯತ್ತಮೋೕ

೦ ೨ ೧ ೦ ೨೦ ೦ ೦ ೦ ೦ ೧ ೨

ಪೇಷತಿಭ್ಯಸಾ । ಹಾಉಹಾಉಹಾಉ । ದೃಶೇವಿಶ್ವಾಯಽ೩ಸೂರಾಽ

೨ ೦ ೧ ೦ ೨

೧ಯಾಽ೨೩ಮ್ ॥ ಹಾಉಹಾಉಹಾಉವಾ ॥ ಏ । ಅರೂರುಚ

೧೦ ೨೦ ೧ ೦ ೨೧ ೦ ೨೦ ೧ ೨೦ ೩ ೧೧೧

ದ್ಘರ್ಮೋೕಅರೂರುಚದುಷಸಾಂದಿವಿಸೂರ್ಯೋೕವಿಭಾತೀಽ೨೩೪೫ ॥

*ದೀ - ೪೨ । ಪ - ೧೫ । ಮಾ - ೨೭ । ಘೀ ॥ ೫.೧೯೧ ॥*

ಈ ೧೯೧ನೆಯ ಸಾಮಗಾನ ಉದುತ್ಯಂ ಜಾತವೇದಸಂ ೩೧ನೆಯ ಋಕ್ ಮೇಲೆ ಅಧಿಷ್ಠಿತವಾಗಿದೆ.

ಸ್ತೋಭ ಭಾಷ್ಯ - ಭಗವತಃ ಸೂರ್ಯಸ್ಯ ಪ್ರಾಗನ್ಯತ್ ರಜೋ ಜ್ಯೋತಿಃ ಉದಯಾದಾರಭ್ಯ ಅನುವರ್ತತೇ ದಿವಸಭಾಗೇ । ಅಪಾಕ್ ಪಶ್ಚಾತ್ ಅಸ್ತ ಮಯಾದನನ್ತರಂ ಚನ್ದ್ರನಕ್ಷತ್ರಗತಂ ರಜಃ ಜ್ಯೋತಿಃ ಅನ್ಯತ್ ಅಸ್ಯೈವ ಸೂರ್ಯಸ್ಯ ಪ್ರಭೂತಂ ಪ್ರವರ್ತತೇ । ತಮಃ ಭ್ಯಸಾ ಭಯೇನೇವ ಅಪಈಷತಿ ಅಪಗಚ್ಛತಿ । ಅರೂರುಚತ್ ದೀಪ್ಯತೇ ಸೂರ್ಯಃ ಏತತ್ ಪ್ರಸಾದಾತ್ ಘರ್ಮಃ ಸೋಮಃ ರೋಚತೇ ಉಷಸಾಂ ಮಧ್ಯೇ । ದಿವಿ ಪ್ರಸೂರ್ಯಃ ಜಗದಧ್ಯಕ್ಷತ್ವೇನ ವಿಭಾತಿ ॥

ಸೂರ್ಯ ಭಗವಂತನ ದಿವ್ಯ ಜ್ಯೋತಿಯು ಉದಯಾಸ್ತಪರ್ಯಂತ ಹಗಲನ್ನನುಸರಿಸಿ ಬೆಳಗುತ್ತದೆ. ಸೂರ್ಯಾಸ್ತಾನಂತರ ಚನ್ದ್ರ ನಕ್ಷತ್ರಗಳ ಜ್ಯೋತಿಯು ರಾತ್ರಿಯನ್ನನುಸರಿಸಿ ಬೆಳಗುತ್ತಿರುವುದರಿಂದ ಕತ್ತಲು ಪಲಾಯನ ಮಾಡುತ್ತದೆ. ಸೂರ್ಯನ ದೀಪ್ತಿಯಿಂದ ಸೋಮನು ಉಷಸ್ಸಿನ ಮಧ್ಯದಲ್ಲಿ ಪ್ರಕಾಶಿಸುತ್ತಾನೆ. ಜಗತ್ತಿನ ಅಧ್ಯಕ್ಷನಾದ ಸೂರ್ಯನಿಂದ ಸ್ವರ್ಗಾದಿ ದಿವ್ಯ ಲೋಕಗಳು ಬೆಳಗುತ್ತವೆ.

॥ ವಾಮದೇವೋ ಗೌತಮಃ ಅನುಷ್ಟುಪ್ ರಾತ್ರಿಃ ॥

೧ ೨೦ ೩ ೧ ೨ ೩ ೧ ೨೦ ೩ ೧ ೨೦
ಆ ಪ್ರಾಗಾದ್ಭದ್ರಾ ಯುವತಿರಹ್ನಃ ಕೇತೂನ್ತ್ಸಮೀರ್ತ್ಸತಿ ।
೧ ೨ ೩ ೨ ೩ ೧ ೨ ೩ ೧ ೨ ೩ ೧ ೨ ೩ ೧ ೨
ಅಭೂದ್ಭದ್ರಾ ನಿವೇಶನೀ ವಿಶ್ವಸ್ಯ ಜಗತೋ ರಾತ್ರೀ ॥ ೭-೬೦೮ ॥

೨ ೩ ೨ ೩ ೨ ೧೨೦ ೩ ೨
ಆ-ಪ್ರ-ಆ-ಅಗಾತ್-ಭದ್ರಾ-ಯುವತಿಃ । ಅಹ್ನಃ-ಅ-ಹ್ನಃ-ಕೇತೂನ್-ಸಮ್-
೩ ೧ ೨೦ ೩ ೨ ೩ ೧ ೨ ೩ ೧ ೨೦ ೧೨೦ ೧೨೦ ೧
ಈರ್ತ್ಸತಿ ॥ ಅಭೂತ್-ಭದ್ರಾ-ನಿವೇಶನೀ-ನಿ-ವೇಶನೀ । ವಿಶ್ವಸ್ಯ-ಜಗತಃ-ರಾ
೨೦
ತ್ರೀ ॥ ೭-೬೦೮ ॥

॥ ರಾತ್ರೇರ್ವ್ರತಮ್ । ರಾತ್ರ್ಯನುಷ್ಟುಪ್ರಾತ್ರಿಃ ॥

೧ — ೧೦ ೦ ೦ ೨ ೧೦ ೨ ೧
೧೧೧.೧. ಹೋಽಽವಿಇ । ೩ । ಆಪ್ರಾಗಾದ್ಭದ್ರಾಯುವತಿಃ ॥ ಹೋ
— ೧ ೨೦ ೧೦ ೦ ೨ —
ಽವಿಇ । ೩ । ಅಹ್ನಃಕೇತೂನ್ತ್ಸಮೀರ್ತ್ಸತಿ ॥ ಹೋಽಽವಿಇ । ೩ ।
೧ ೦ ೨ ೧೦ ೨ ೧೦ ೨೦ — ೧ ೨ ೧ ೨೦ ೧೦
ಅಭೂದ್ಭದ್ರಾನಿವೇಶನೀ ॥ ಹೋಽಽವಿಇ । ೩ । ವಿಶ್ವಸ್ಯಜಗತೋರಾ
೨೦ — ೧ ೮ ೨
ತ್ರೀ । ಹೋಽಽವಿಇ । ೨ । ಹೋಽಽವಿ । ವಾಽಽ೩ । ಹಾಉವಾಽಽ೩ ॥
೧ ೧ ೧
ಈಽಽವಿ೩೪೫ ॥ *ದೀ - ೧೪ / ಪ - ೨೨ / ಮಾ - ೧೬ / ಝೂ ॥ ೬೧೯೨ ॥*

ಸ್ತೋಭ ಭಾಷ್ಯ - ರಾತ್ರೀ ಭದ್ರಾ ಶ್ರಮಜಕ್ಲೇಶನಿವಾರಣಾತ್ಭನ್ದನೀಯಾ । ಯುವತಿಃ ಸದೈಕರೂಪತ್ವಾತ್ ಅವೃದ್ಧಾವಾ । ಪ್ರಾಗಾತ್ ಆಗಚ್ಛತಿ । ಅಹ್ನಃ ಕೇತೂನ್ನಯತ್ವೇನ ವ್ಯವಸ್ಥಾನಾತ್ ಚಿಹ್ನಭೂತಾನ್ ರಶ್ಮೀನ್ ಸಮೀರ್ತ್ಸತಿ ಪ್ರವರ್ತಯತಿ। ವಿಶ್ವಸ್ಯ ಜಗತಃ ರಾತ್ರೀ ನಿವೇಶನೀ ಸಂವೇಶನ ಕಾರಿಣೀ ಅಭೂತ್ ಭವತಿ ॥

ರಾತ್ರಿ ದೇವತೆಯು ಶ್ರಮಜನ್ಯ ದುಃಖವನ್ನು ಪರಿಹರಿಸುವುದರಿಂದ ಸ್ತುತಿ ಯೋಗ್ಯವಾಗಿ ಕೀರ್ತಿಪಡೆದಿದೆ. ರಾತ್ರಿ ದೇವತೆಯು ಬಾಲ್ಯ ಯೌವನ ಮುಪ್ಪುಗಳೆಂಬ ವಿಕಾರಗಳಿಗೊಳಗಾಗದೇ ಸದಾ ಆಕರ್ಷಣೀಯವಾದ ಕಲ್ಯಾಣಕಾರಿಯಾದ ಒಂದೇ ಬಗೆಯ ಯೌವನ ರೂಪದಿಂದಲೇ ಇದ್ದು ಹಗಲಿನ ಚಿಹ್ನೆಯಾದ ಸವಿತೃವಿನ ಕಿರಣಗಳ ಸಮೃದ್ಧಿಯಿಂದಾದ ಆಯಾಸವನ್ನು ಪರಿಹರಿಸಲು ಸಮಸ್ತ ಜಗತ್ತಿನ ಎಲ್ಲಾ ಜೀವ ಜಾತವನ್ನೂ ಎದಿರುಗೊಂಡು ಸಂತೈಸುವ ವಿಶ್ರಾಮಧಾಮವಾಗಿದೆ.

ಭದ್ರಾ ಸೂರ್ಯಪ್ರಕಾಶಸಂತಾಪಂ ನಿವಾರಯನ್ತೀ ಸುಖಕರೀ **ಯುವತಿಃ** ತಮಸೋ ಮಿಶ್ರಯಿತ್ರೀ ರಾತ್ರಿಃ **ಆಪ್ರಗಾತ್** ಆಭಿಮುಖ್ಯೇನ ಪ್ರಗಚ್ಛತಿ । **ಅಹ್ನಃ** ಚನ್ದ್ರಮಸಃ **ಕೇತೂನ್** ರಶ್ಮೀನ್ **ಸಮೀರ್ತ್ಸತಿ** ಸಮ್ಯಕ್ ಬನ್ಧಯಿತುಮಿಚ್ಛತಿ ಚ । ಅತ ಏವ ಭದ್ರಾ ಕಲ್ಯಾಣೀ ರಾತ್ರೀ **ವಿಶ್ವಸ್ಯ** ಸರ್ವಸ್ಯ **ಜಗತಃ ನಿವೇಶನೀ** ನಿವೇಶಕಾರಿಣೀ **ಅಭೂತ್** ಭವತಿ । ಅಹನಿ ಸ್ವಸ್ವವ್ಯಾಪಾರಾತ್ ಖಿನ್ನಾನ್ ಸರ್ವಪ್ರಾಣಿನಃ ಸ್ವಾಶ್ರಯೇಷು ಸ್ವಾಪಯತೀತ್ಯರ್ಥಃ ॥

**ಭದ್ರಾ ಯುವತಿಃ** ಕಲ್ಯಾಣವನ್ನುಂಟುಮಾಡುವ ಸ್ತ್ರೀ ಬಿಸಿಲಿನ ದಗೆಯನ್ನು ನಿವಾರಿಸಿ ತಣ್ಣನೆಯ ಕತ್ತಲಿನೊಂದಿಗೆ ಸೇರಿಸುವ ದುಃಖವನ್ನುದೂರಮಾಡಿ ಆನಂದ ವನ್ನೀಯುವ **ರಾತ್ರಿಃ** ಪೃಥಿವಿಯೇಶರೀರವಾಗಿ ಆದಿತ್ಯನೇಕಣ್ಣಾಗಿ ವಾಯುವೇ ಪ್ರಾಣವಾಗಿ ಸೋಮನೇಗಂಧವಾಗಿ ಸ್ನೇಹರೂಪದಿಂದಾಗಿರುವ ಅರ್ಚಿರಾದಿಮಾರ್ಗದಿಂದ ಪ್ರಾಪ್ತವಾಗುವ ಬ್ರಹ್ಮಲೋಕವನ್ನನುಗ್ರಹಿಸುವ ರಾತ್ರೀ ದೇವಿ–ಸಾ.ವಿ.ಬ್ರಾ.೩–೮ ॥ ಆಶ್ರಯ ರೂಪಾ ಛಾಯಾ ಪರಮಾತ್ಮನ ಶ್ರೀ – ಯಸ್ಯಚ್ಛಾಯಾಽಮೃತಮ್ । ಋ. ಸಂ. ೧೦.೧೨೧–೨ । ರಾತ್ರಿರೇವ ಶ್ರೀಃ ಶತ. ೧೦–೨–೬–೧೬ । ಕ್ಷೇಮೋ ರಾತ್ರಿಃ ಶತ.೧೩–೧–೪–೩ ॥ **ಆಪ್ರಾಗಾತ್** ಎದುರುಗೊಳ್ಳಲು ಬರುತ್ತಿದೆ. **ಅಹ್ನ** ಚನ್ದ್ರಮಸಃ ಬೆಳದಿಂಗಳಿನ ಹಗಲಿನ ಪ್ರೇರಕನಾದ ಸವಿತೃವಿನ – ಅಹರೇವ ಸವಿತಾ । ಗೋ ೧.೧.೩೩ ॥ **ಕೇತೂನ್** ಕಿರಣಗಳೊಂದಿಗೆ ಪ್ರಜ್ಞಾನದೊಂದಿಗೆ – ಕೇತುಃ ಪ್ರಜ್ಞಾನಮ್ ನಿಘಂ ೩–೯ ॥ **ಸಮ್ ಈರ್ತ್ಸತಿ** ಸಂಬಂಧ ಹೊಂದಿ ಸಮೃದ್ಧವನ್ನಾಗಿಸುತ್ತದೆ. **ಭದ್ರಾ** ಕಲ್ಯಾಣಕಾರಿಯಾದ ರಾತ್ರಿಯು **ವಿಶ್ವಸ್ಯ ಜಗತಃ** ಪ್ರಪಂಚದ ಎಲ್ಲಾ ಜೀವ ಮಾತ್ರಕ್ಕೂ **ನಿವೇಶನೀ ಅಭೂತ್** ಆಶ್ರಯ ಸ್ಥಾನವಾಗಿ ಪರಿಣಮಿಸಿತು. ವಿಶ್ರಾಂತಿ ಧಾಮವಾಯಿತು.

ದುಃಖವನ್ನು ದೂರಮಾಡಿ ಪ್ರಪಂಚದ ಸಮಸ್ತ ಜೀವ ಜಗತ್ತಿಗೂ ಆನಂದವನ್ನೀಯುವ ಕಲ್ಯಾಣಕಾರಿಯಾದ ಹಗಲಿನಲ್ಲಿ ಬಿಸಿಲಿನಿಂದುಂಟಾಗುವ ಸಂತಾಪವನ್ನು ಧಗೆಯನ್ನುನಿವಾರಿಸಿ ತಂಪನ್ನೀಯುವ ಕತ್ತಲು ಬೆಳದಿಂಗಳು ಪರಸ್ಪರ ಅಭಿಮುಖವಾಗಿ ಆಹ್ಲಾದವನ್ನೀಯುವ ರಾತ್ರೀದೇವಿಯು ವಿಶ್ರಾಂತಿಯನ್ನೀಯುವ ಶಾಂತಿಯ ಆಶ್ರಯಸ್ಥಾನವಾಗಿದ್ದಾಳೆ.

*ಕಾಂತೆವೋಲ್ ಬರ್ಪುದೀ ರಾತ್ರಿ*
*ಶಮಿಕುಂ ಪಗಲ ಬೇಗೆಯಂ*
*ಸರ್ವಲೋಕದ ವಿಶ್ರಾಂತಿ*
*ಸ್ಥಾನಮೀಕೆಯ ನಲ್ಬಗೆ ॥*

## ಋಕ್ – ೬೦೯

॥ ಭರದ್ವಾಜೋ ಬಾರ್ಹಸ್ಪತ್ಯಃ ಜಗತೀ ವೈಶ್ವಾನರೋಗ್ನಿಃ ॥

೩ ೨ ೩ ೧ ೨ ೩ ೨ ೩ ೨ಉ ೩ ೨ ೩ ೧ ೨ ೩ ೧ ೨
**ಪ್ರಕ್ಷಸ್ಯ ವೃಷ್ಣೋ ಅರುಷಸ್ಯ ನೂ ಮಹಃ ಪ್ರ ನೋ ವಚೋ ವಿದಥಾ**
೩ ೧ ೨ ೩ ೧ ೨ ೩ ೧ ೨೦ ೩ ೨ ೩ ೧ ೨
**ಜಾತವೇದಸೇ । ವೈಶ್ವಾನರಾಯ ಮತಿರ್ನವ್ಯಸೇ ಶುಚಿಃ ಸೋಮ**
೩ ೧ ೨ ೩ ೧ ೨
**ಇವ ಪವತೇ ಚಾರುರಗ್ನಯೇ** ॥ ೮-೬೦೯ ॥

೩ ೧ ೨ ೩ ೧ ೨೦ ೧ ೨೦ ೩ ೧ ೨ ೧ ೨೦ ೩ ೧ ೨೦ ೩ ೧ ೨
**ಪ್ರಕ್ಷಸ್ಯ–ಪ್ರ–ಕ್ಷಸ್ಯ–ವೃಷ್ಣಃ–ಅರುಷಸ್ಯ–ನೂ–ಮಹಃ । ಪ್ರ–ನಃ–ವಚಃ–ವಿದಥಾ–**
೩ ೧ ೨ ೩ ೨ ೩ ೧ ೨ ೩ ೧ ೨ ೩ ೨ ೧
**ಜಾತವೇದಸೇ–ಜಾತ–ವೇದಸೇ ॥ ವೈಶ್ವಾನರಾಯ–ವೈಶ್ವ–ನರಾಯ–ಮತಿಃ–ನ**
೨೦ ೧ ೨೦ ೧ ೨೦ ೩ ೧ ೨೦ ೩ ೧ ೨
**ವ್ಯಸೇ–ಶುಚಿಃ । ಸೋಮಃ–ಇವ–ಪವತೇ–ಚಾರುಃ–ಅಗ್ನಯೇ ॥**

೨ ೩ ೨ ೩ ೨ ೧ ೨೦ ೧೨೦ ೧೨೦
ಸ್ತೋಭ ಪದಪಾಠ– ಹಸ್–ಹಹಸ್–ಅರ್ಚಿಃ–ಶೋಚಿಃ । ತಪಃ–ಹರಃ ॥ ಸಾ.೧೯೩ ॥

॥ ವಿಷ್ಣೋರ್ವ್ರತಮ್ । ವಿಷ್ಣುರ್ಜಗತೀ ವೈಶ್ವಾನರಃ ॥

೨೦ ೦ ೦ ‾‾ ೧ ^
**೧೧೨.೧. ಹಾಉಹಾಉಹಾಉ । ಊಽ೨ । ೨ । ಊಽ೨ ।**
೨ ೧ ೨ ೧ ೨ ೧ ೦
**ವಾಽ೩ । ಹಾಉವಾಽ೩ । ಹಸ್ ಸ್ಥಿ ಹಹಸ್ । ಅರ್ಚಿಶ್ಶೋಚಿಸ್ತ**
೦ ೨ ೧ ೦ ೨ ೧೦ ೨ ೧
**ಪೋಹರಃ । ಪ್ರಕ್ಷಸ್ಯವೃಷ್ಣೋಅರುಷಸ್ಯನೂಮಾಽ೨೩ಹಾಃ ॥ ಪ್ರ**

೦ ೦ ೦ ೦ ೨೧೦ ೨ ೦ ೦ ೧೦
ನೋವಚೋವಿದಥಾಜಾತವೇದಾಽ೨೩ಸಾಇ ॥ ವೈಶ್ವಾನರಾಯಮ
೨೧೦ ೨ ೧೦ ೦ ೦ ೨೧
ತಿರ್ನವ್ಯಸೇಶೂಽ೨೩ಚೀಃ ॥ ಸೋಮಇವಪವತೇಚಾರುರಗ್ನಾಽ೨೩
೨ ೨೦ ೦ ೦ — ೧ ^
ಯಾಽ೩ಇ । ಹಾಉಹಾಉಹಾಉ । ಊಽ೨ । ೨ । ಊಽ೨ ।
೨ ೩ ೧೧೧
ವಾಽ೩ । ಹಾಉವಾಽ೩ ॥ ಈಽ೨೩೪೫ ॥

*ದೀ - ೨೨ । ಪ - ೧೯ । ಮಾ - ೧೭ । ಪ್ರೋ ॥ ೭೧೯೩ ॥*

ಸ್ತೋಭ ಭಾಷ್ಯ - ವಿಶ್ವಾನರಸ್ಯ ಕಾಮಪ್ರಕ್ಷರಣಾತ್ ಪ್ರಕ್ಷಸ್ಯ ವೃಷ್ಣಃ ವರ್ಷಿತುಃ ಅರುಷಸ್ಯ ಅಹಿಂಸಕಸ್ಯ ಮಹಃ ಮಹತ್ವಂ ಭವತಿ ॥ ನೋಽಸ್ಮಾಕಂ ಏತಸ್ಮೈ ಜಾತವೇದಸೇ ಅಗ್ನಯೇ ವಿದಥಾ ವೇದನಸ್ಥಾನೇ ಯಾಗಸ್ತುತಿಕಾಲೇ ನವ್ಯಸೇ ನ ವಿಪರ್ಯೇತಿ । ಸೋಮ ಇವ ಪವತೇ ಸೋಮಃ ಯಥಾ ಸ್ತುತ್ಯಾದಿನಾ ಮಹತ್ತ್ವಾಂ ಪ್ರಾಪ್ನೋತಿ । ಏವಂ ಭಕ್ತ್ಯಾದಿವಶೇನ ಚಾರುಃ ಶೋಭನೋ ಮನ್ದಃ ಪವತೇ । ಪರಮೇಶ್ವರ ವಿಷಯೇ ಪವಿತ್ರತಾಂ ಪ್ರತಿಪದ್ಯತೇ । ಅರ್ಚಿಃ ಪ್ರಕಾಶಃ ಶೋಚಿಃ ಪ್ರಕಾಶಃ ತಪಃ ಪಾವಕಃ ಹರಃ ಭೋಗ್ಯಾಽಹರಣಾತ್ ವೈಶ್ವಾನರ ಇತ್ಯರ್ಥಃ॥

ಯಜ್ಞಯಾಗಾದಿ ಕರ್ಮಾನುಷ್ಠಾನಕಾಲದಲ್ಲಿ ಭಕ್ತರ ಭಕ್ತಿ ವಿಶೇಷಗಳಿಂದಲೂ ಸ್ತುತಿಗಳ ಪರಿಣಾಮದಿಂದಲೂ ಸೋಮನು ಮಹತ್ತ್ವವನ್ನು ಪಡೆದು ನಮ್ಮನ್ನು ಪವಿತ್ರಗೊಳಿಸುವಂತೆ ವೈಶ್ವಾನರ ನಾಮಕ ಅಗ್ನಿ ಭಗವಂತನು ಯಾವುದರಿಂದಲೂ ಪರಿಣಾಮ ಪರಿವರ್ತನಗಳನ್ನು ಹೊಂದದೆ ಎಲ್ಲಕ್ಕೂ ಅತೀತನಾಗಿದ್ದು ಯಾವಾಗಲೂ ಮಹಾಮಹಿಮನೂ ಅಹಿಂಸಕನೂ ಸರ್ವರ ಮನೋರಥಗಳನ್ನೀಡೇರಿಸುವವನೂ ಕಾಮ ವರ್ಷಕನೂ ಭೋಗಾದಿ ಐಶ್ವರ್ಯಪ್ರದನೂ ಪವಿತ್ರನೂ ಪ್ರಕಾಶಕನೂ ತೇಜಸ್ವಿಯೂ ಆಗಿದ್ದು ಭಗವಂತನಲ್ಲಿ ನಮ್ಮ ಭಕ್ತಿಯನ್ನು ಗಾಢವಾಗಿಸಿ ನಮ್ಮನ್ನು ಪವಿತ್ರಗೊಳಿಸುತ್ತಾನೆ.

ಪ್ರಕ್ಷಸ್ಯ ಸಮ್ಪೃಕ್ತಸ್ಯ ವ್ಯಾಪ್ತಸ್ಯ । ಯದ್ವಾ । ಪೃಕ್ಷಂ ಹವಿರ್ಲಕ್ಷಣಮನ್ನಮ್ । ತದ್ವತಃ ವೃಷ್ಣಃ ಸೇಕ್ತುಃ ಅರುಷಸ್ಯ ಆರೋಚನಸ್ಯ ವೈಶ್ವಾನರಾಯ ಮಹಃ ಪೂಜಾಯುಕ್ತಂ ಬಲಂ ತೇಜೋ ವಾ ನು ಕ್ಷಿಪ್ರಂ ಸ್ತೌಮಿ । ಅತ ಏವ ನಃ ಅಸ್ಮದೀಯಂ ವಚಃ ವಚನಂ ವಿದಥೇ ಯಾಗೇ ಪ್ರ ಯಚ್ಛತಿ ಸ್ತೌತೀತ್ಯರ್ಥಃ । ಜಾತವೇದಸೇ ಜಾತಪ್ರಜ್ಞಾಯ ಜಾತಧನಾಯ ವಾ । ತಮುದ್ದಿಶ್ಯೇತ್ಯರ್ಥಃ । ಉಕ್ತಮೇವ ಪ್ರಕಾರಾಂತರೇಣಾದರಾದಾಹ । ನವ್ಯಸೇ ನವತರಾಯ । ವೈಶ್ವಾನರಾಯ ಅಗ್ನಯೇ ಶುಚಿಃ ನಿರ್ಮಲಾ । ಸ್ತೋತೄಣಾಂಶೋಧಯಿತ್ರೀ ವಾ ಚಾರುಃ ಕಲ್ಯಾಣೀ ಮತಿಃ ಮನನೀಯಾ ಸ್ತುತಿಶ್ಚ ಪವತೇ ಮತ್ಸಕಾಶಾತ್ಪ್ರಭವತಿ । ಸ್ವಯಮೇವ ಗಚ್ಛತೀತ್ಯರ್ಥಃ ॥ ಸೋಮಃ ಇವ ಯಥಾ ಸೋಮಃ ದಶಾಪವಿತ್ರಾತ್ಸ್ರವತಿ ತದ್ವದಿತ್ಯರ್ಥಃ ॥ ಪ್ರಕ್ಷಸ್ಯ -

ಪೃಕ್ಷಸ್ಯ ಇತಿ । ಮಹಃ – ಸಹಃ ಇತಿ ಪ್ರನೋವಾಚ – ಪ್ರನುವೋಚಮ್ ಇತಿ । ಜಾತವೇದಸೇ – ಜಾತವೇದಸಃ ಇತಿ । ನವ್ಯಸೇ – ನವ್ಯಸಿ ಇತಿ । ಚ ಸಾಮ್ನ ಋಚಃ ಪಾಠಃ ಭೇದಾಃ ॥

**ಪ್ರಕ್ಷಸ್ಯ** ಸರ್ವವ್ಯಾಪಕನೂ **ವೃಷ್ಣಃ** ಮನೋರಥಗಳನ್ನೀಡೇರಿಸುವವನೂ **ಅರುಷಸ್ಯ** ತೇಜಸ್ವಿಯೂ ಪ್ರಕಾಶಮಯನೂ **ಜಾತವೇದಸೇ** ಜಾತ ಪ್ರಜ್ಞನೂ ಆದ ಜಾತವೇದನೆನಿಸಿಕೊಂಡಿರುವ ಅಗ್ನಿಯ – ನಿರು. ವೈ ೧–೧೯–೨೦ ॥ **ಮಹಃ** ಮಹಾಮಹಿಮೆಯನ್ನೂ ಪೂಜನೀಯತೆಯನ್ನೂ **ವಿದಥಾ** ಈಗಲೇ ಯಜ್ಞದಲ್ಲಿ – ನಿರು ೬–೭ ॥ **ಮತಿಃ** ಸ್ತುತಿಸುತ್ತೇನೆ – ಮನ್ಯತೇ ಅರ್ಚತಿ ಕರ್ಮ – ನಿಘಂ. ೨–೬ ॥ **ಶುಚಿಃ** ನಿರ್ಮಲವಾದುದೂ **ಚಾರುಃ** ಮನೋಹರವಾದುದೂ ಆದ **ವಚಃ** ನಮ್ಮ ವಾಚನವು ಪ್ರಶಂಸಾ ರೂಪವಾದ ಸ್ತುತಿಯು **ವೈಶ್ವಾನರಾಯ** ವಿಶ್ವನರಹಿತಾಯ ವೈಶ್ವಾನರ ರೂಪಿಯಾದ – ನಿರು ದೈ ೧–೨೧–೨೨ ॥ **ಅಗ್ನಯೇ** ಅಗ್ನಿಯನ್ನುದ್ದೇಶಿಸಿ **ಸೋಮ ಇವ** ಸೋಮರಸ ಪ್ರವಾಹದಂತೆ **ಪವತೇ** ತಡೆಯಿಲ್ಲದೆ ಪ್ರವಹಿಸುತ್ತದೆ.

ಸರ್ವವ್ಯಾಪಕನೂ ಇಷ್ಟಾರ್ಥಗಳನ್ನೀಡೇರಿಸುವವನೂ ತೇಜಸ್ವಿಯೂ ಜಾತ ಪ್ರಜ್ಞನೂ ಮಹಾಮಹಿಮನೂ ವೈಶ್ವಾನರ ರೂಪನೂ ಆದ ಅಗ್ನಿಯನ್ನುದ್ದೇಶಿಸಿ ಪ್ರಶಂಸಿಸುವ ಮನೋಹರವಾದ ನಮ್ಮ ಸ್ತುತಿಗಳು ಸೋಮರಸ ಪ್ರವಾಹದಂತೆ ತಡೆಯಿಲ್ಲದೆ ಪ್ರವಹಿಸುತ್ತವೆ. ಅಥವಾ ಭಗವಂತನೇ ಅಗ್ನಿಗೆ ಸೋಮರಸವು ಪ್ರಾಪ್ತ ವಾಗುವಂತೆ ನಿನ್ನ ಜ್ಞಾನದಿಂದ ನಮಗೆ ಪವಿತ್ರಬುದ್ಧಿ ಪ್ರಾಪ್ತವಾಗಲೆಂದು ವ್ಯಾಪಕನೂ ಶಕ್ತಿವಂತನೂ ತೇಜಸ್ವಿಯೂ ಮಾನವರ ಹಿತೈಷಿಯೂ ಆದ ನಿನ್ನನ್ನು ಸ್ತುತಿಸುತ್ತೇವೆ.

*ದೀಪ್ತಿಮಂತನನಗ್ನಿದೇವನನೆಲ್ಲೆಡೆಗಮೆಸೆದಿರ್ಪನಂ*
*ನುತಿಪೆವಾಂ; ಸವನಂಗಳೊಳ್ ಹುತವಹನಿಗೊಪ್ಪುವ ಮಂತ್ರದಿಂ ।*
*ಸುಂದರಂ ಸುಪವಿತ್ರನತಿಶಯಸೌಖ್ಯದಂ ಶಿಖಿ ತೋಷಿಸು–*
*–ತ್ತೆಮ್ಮನೊಪ್ಪಿಸಿಕೊಳ್ಗೆ ಕೆಲದೊಳ್ ಸೋಮನಂ ಬಳಿಕೊಳ್ವವೊಲ್ ॥*

## ಋಕ್ – ೬೧೦

॥ ಋಜಿಶ್ವಾ ಭಾರದ್ವಾಜಃ ಜಗತೀ ವಿಶ್ವೇದೇವಾಃ ॥

೧ ೨ ೩ ೧ ೨ರ ೩ ೨ ೩ ೧ ೨ರ ೩
**ವಿಶ್ವೇ ದೇವಾ ಮಮ ಶೃಣ್ವನ್ತು ಯಜ್ಞಮ್ ಉಭೇ ರೋದಸೀ ಅ**

೨ರ ೩ ೧ ೨ ೨ ೩ ೧ ೨ ೩ ೧ ೨
ಪಾಂ ನಪಾಚ್ಚ ಮನ್ಮ । ಮಾ ವೋ ವಚಾಂಸಿ ಪರಿಚಕ್ಷ್ಯಾಣಿ
೩ ೨ಉ ೩ ೧ ೨
ವೋಚಂ ಸುಮ್ನೇಷ್ವಿದ್ವೋ ಅನ್ತಮಾ ಮದೇಮ ॥ ೯-೬೧೦ ॥

೧ ೨ರ ೩ ೨ ೧ ೨ರ ೩ ೨ ೩ ೧ ೨ ೧ ೨ರ ೩ ೧ ೨
ವಿಶ್ವೇ-ದೇವಾಃ-ಮಮ-ಶೃಣ್ವನ್ತು-ಯಜ್ಞಮ್ । ಉಭೇ-ಇತಿ-ರೋದಸೀ-ಇತಿ
೩ ೨ ೧ ೨ರ ೩ ೧ ೨ರ ೩ ೧ ೨ರ ೩ ೧ ೨ ೩
-ಅಪಾಮ್-ನಪಾತ್-ಚ-ಮನ್ಮ ॥ ಮಾ-ವಃ-ವಚಾಂಸಿ-ಪರಿಚಕ್ಷ್ಯಾಣಿ-ಪರಿ
೧ ೨ರ ೩ ೧ ೨ ೩ ೧ ೨ರ ೩
-ಚಕ್ಷ್ಯಾಣಿ-ವೋಚಮ್ । ಸುಮ್ನೇಷು-ಇತ್-ವಃ-ಅನ್ತಮಾಃ-ಮದೇಮ ॥
೯-೬೧೦ ॥

॥ ವಿಶ್ವೇಷಾಂ ದೇವಾನಾಂ ವ್ರತಮ್ । ವಿಶ್ವೇದೇವಾ ದ್ಯಾವಾಪೃಥಿವ್ಯೌ ಇನ್ದ್ರಃ ಜಗತೀ ವಿಶ್ವೇದೇವಾಃ ॥

೨ರ ೦ ೦ ೧ ೨ ೧ —
೧೧೩.೧. ಹಾಉಹಾಉಹಾಉ । ಆಇಹೀ । ೩ । ಆಇಹೀಽ೨ ।
೧ ೨ — ೧ ೨ ೧ ೦ ೦ ೦
೩ । ಆಇಹಿಹಾಽ೨ಇ । ೨ । ಆಇಹಿಹಾಇ । ವಿಶ್ವೇದೇವಾಮಮಶೃ
೨ ೧ ೨ ೧೦ ೦ ೦ ೦ ೦ ೨ ೧
ಣ್ವನ್ತುಯಾಽ೨೩ಜ್ಞಾಮ್ ॥ ಉಭೇರೋದಸೀಅಪಾನ್ನಪಾಚ್ಚಮಾಽ೨
೨ ೧೦ ೦ ೦ ೦ ೨ ೧ ೨
೩ನ್ಮಾ ॥ ಮಾವೋವಚಾಂಸಿಪರಿಚಕ್ಷ್ಯಾಣಿವೋಽ೨೩ಚಾಽ೩ಮ್ ॥
೨ರ ೦ ೦ ೧ ೨ ೧ — ೧
ಹಾಉಹಾಉಹಾಉ । ಆಇಹೀ । ೩ । ಆಇಹೀಽ೨ । ೩ । ಆಇ
೨ — ೧ ೨ ೧ ೦ ೦ ೦
ಹಿಹಾಽ೨ಇ । ೨ । ಆಇಹಿಹಾಇ । ಸುಮ್ನೇಷ್ವಿದ್ವೋಅನ್ತಮಾಮ
^ ೩ ೨ ೧೧೧
ದಾಽ೨ಇಮಾಉವಾಽ೩ ॥ ಈಽ೨೩೪೫ ॥

*ದೀ - ೨೧ । ಪ - ೨೫ । ಮಾ - ೩೬ । ಜ್ರೋ ॥ ೮.೧೯೪ ॥*

ಸ್ತೋಭ ಭಾಷ್ಯ - ವಿಶ್ವೇದೇವಾ ರೋದಸೀ ದ್ಯಾವಾಪೃಥಿವ್ಯೌ ಅಪಾನ್ನಪಾಚ್ಚ ಯಜ್ಞಂ ಸ್ವಸುತ್ಯಾದಿಕಂ ಯಾಜನಂ ಮನ್ಮ ಮದೀಯಂ ಶೃಣ್ವನ್ತು । ಭಗವತಾಂ

ಪ್ರಸಾದಾತ್ **ವಃ** ಯುಷ್ಮಭ್ಯಂ ವಚಾಂಸಿ **ಪರಿಚಕ್ಷ್ಯಾಣಿ** ವರ್ಜನೀಯಾನಿ ಋಷಿಛನ್ದೋ ದೈವತ ರಹಿತಾನಿ । **ಮಾವ್ರೋಚಂ ಸುಮ್ನೇಷು** ಹವಿರ್ವಿಷಯೇ **ಅನ್ತಮಾ** ಭಕ್ತಿವಶೇನ ನಿಕಟತಮಾ **ವಃ** ಯುಷ್ಮಾನ್ **ಮದೇಮ** ತರ್ಪಯೇಮ ॥

ತಮ್ಮ ಅನುಗ್ರಹದಿಂದ ಋಷಿ ಛನ್ದೋ ದೇವತಾರಹಿತವಾದ ವೇದಮನ್ತ್ರಗಳ ಸ್ತುತಿಗಳನ್ನು ಪಠಿಸುವುದಿಲ್ಲವಾಗಿ ವಿಶ್ವೇದೇವತೆಗಳೇ ದ್ಯಾವಾ ಪೃಥ್ವಿಗಳೇ ಅಗ್ನಿ ದೇವತೆಗಳೇ ಯಜ್ಞ ಯಾಜನಗಳಲ್ಲಿ ನಾವು ಮಾಡುವ ವೇದ ಮನ್ತ್ರಗಳ ಸ್ತುತಿಗಳನ್ನು ಆಲಿಸೋಣವಾಗಲಿ. ನಿಮ್ಮ ಸಮೀಪವರ್ತಿಗಳಾಗಿ ಭಕ್ತಿವಶದಿಂದ ಅರ್ಪಿಸುವ ಹವಿಸ್ಸುಗಳು ತಮಗೆ ತೃಪ್ತಿಯನ್ನುಂಟುಮಾಡಿ ಸಂತಸಪಡಿಸಲಿ.

ಸಾಯಣ ಭಾಷ್ಯ–**ವಿಶ್ವೇ** ಸರ್ವೇ **ದೇವಾಃ ಮಮ** ಮದೀಯಂ **ಮನ್ಮ** ಮನನೀಯಂ **ಯಜ್ಞಂ** ಯಜನೀಯಮ್ । ಪೂಜಾಂ ಹವೀಂಷಿ ವಾ । **ಶೃಣ್ವನ್ತು** । ಗೃಹ್ಣನ್ತ್ವಿತ್ಯರ್ಥಃ । **ಅಪಾಂ ನಪಾತ್** ಮಧ್ಯಸ್ಥಾನೀಯೋಽಗ್ನಿಶ್ಚ । **ಉಭೇ ರೋದಸೀ** ದ್ಯಾವಾಪೃಥಿವ್ಯೌ ಅಸ್ಮ ದೀಯಂ ಸ್ತೋತ್ರಂ ಶೃಣ್ವನ್ತು । **ಚಿತ್ತೇ** ಅವಧಾರಯನ್ತು ॥ ಅಥ ಪ್ರತ್ಯಕ್ಷಕೃತಾಃ । ಹೇ **ದೇವಾಃ ವಃ** ಯುಷ್ಮಾಕಂ **ಪರಿಚಕ್ಷ್ಯಾಣಿ** ಪರಿವರ್ಜನೀಯಾನಿ ಯಾನಿ **ವಚಾಂಸಿ** ಸ್ತೋತ್ರಾಣಿ **ಮಾವ್ರೋಚಂ** ನ ಬ್ರವೀಮಿ । ಅಪಿತು ಸಮೀಚೀನಾನೀತಿ । ಅತಃ **ವಃ** ಯುಷ್ಮಾಕಮ್ **ಅನ್ತಮಾಃ** ಅನ್ತಿಕತಮಾಃ ಸನ್ತೋ ವಯಂ **ಸುಮ್ನೇಷು ಇತ್** ಯುಷ್ಮಭಿರ್ದತ್ತೇಷು ಸುಖೇಷ್ವೇವ ವರ್ತಮಾನಾಃ **ಮದೇಮ** ಮೋದೇಮ । ಯಜ್ಞಮ್ ಯಜ್ಞಿಯಾಃ ಇತಿ ಪಾಠೌ ॥

**ವಿಶ್ವೇದೇವಾ** ವಿಶ್ವೇದೇವತೆಗಳೂ ಸಕಲ ದೇವತೆಗಳೂ ವೇದಜ್ಞ ಋಷಿಗಳೂ – ವಿಶ್ವೇದೇವಾಃ ಸೂಕ್ತವಾಚಃ ತೈ.ಸಂ ೩–೩–೨–೧, ೨ । ಪ್ರಾಣೇನ್ದ್ರಿಯಗಳೂ – ಪ್ರಾಣಾ ವೈ ವಿಶ್ವೇದೇವಾಃ ತೈ.ಸಂ ೫–೨–೨–೧೧ ॥ ಪ್ರಾಣಾ ಇನ್ದ್ರಿಯಾಣಿ । ಕಾಠ ೮–೧ ॥ **ಉಭೇ ರೋದಸೀ** ದ್ಯಾವಾಪೃಥಿವಿಗಳೂ – ರೋದಸೀ ದ್ಯಾವಾಪೃಥಿವೀ ನಾಮ ನಿಘಂ ೩–೩೦ ॥ ಮಾತೃವರ್ಗಪಿತೃವರ್ಗಗಳೆರಡೂ–ದ್ಯೌರ್ಮೇಪಿತಾ ಮಾತಾ ಪೃಥಿವೀ ಮಹೀಯಮ್ । ಋ ೧–೧೬೪ – ೩೩ ॥ ಪ್ರಾಣೋದಾನಗಳೆರಡೂ – ದ್ಯಾವಾ ಪೃಥಿವೀ ಪ್ರಾಣೋದನೌ ಶತ. ೪–೩–೧–೨೨ ॥ **ಚ** ಮತ್ತು **ಅಪಾಂ ನಪಾತ್** ಅಪಾನ್ನಪಾತ್ ಹೆಸರಿನ ಅಂತರಿಕ್ಷಾಗ್ನಿಯೂ ಮಿಂಚೂ ನಿರು ದೈ ೪–೧೮, ೧೯ ॥ ಉಪಾಸಕನನ್ನು ಪತಿತನಾಗದಂತೆ ರಕ್ಷಿಸುವ ಭಗವಂತನೂ **ಮಮ** ನನ್ನ ನಾನು ಕೈಗೊಂಡಿರುವ **ಯಜ್ಞಂ** ಯಜ್ಞವನ್ನು ಅಧ್ಯಾತ್ಮ ಯಜ್ಞವನ್ನು ಅನುಮೋದಿಸಲಿ. ಸಹಕರಿಸಿ ವೃದ್ಧಿಯಾಗುವಂತೆ ನೆರವಾಗಲಿ. **ಮನ್ಮ** ಮನನೀಯವಾದ ಮನಮುಟ್ಟುವ ಸ್ತುತಿ ವಚನಗಳನ್ನು ಸ್ತೋತ್ರಗಳನ್ನು – ಮನ್ಮಭಿಃ ಮನನೀಯೈಃ ಸ್ತೋಮೈಃ ನಿರು ೧೦–೬ ॥ **ಶೃಣ್ವನ್ತು** ಕೇಳಿ ಸ್ವೀಕರಿಸಲಿ **ವಃ** – ತಮ್ಮಗಳ **ಪರಿಚಕ್ಷ್ಯಾಣಿ ವಚಾಂಸಿ** ನಿಂದನೀಯವಾದ ತಿರಸ್ಕಾರಯುತವಾದ ವಚನಗಳನ್ನು ಸ್ತೋತ್ರಗಳನ್ನು **ಮಾ ವ್ರೋಚಂ** ವಾಚಿಸುವುದಿಲ್ಲ ಪಠಿಸುವುದಿಲ್ಲ. **ವಃ ಅನ್ತಮಾಃ** ನಿಮ್ಮ ಅಂತರಂಗಕ್ಕೆ ಸಂಬಂಧಿಸಿದ ನಾವು **ಸುಮ್ನೇಷು ಇತ್** ಅತ್ಯಂತ ಸುಖದಿಂದಿದ್ದು **ಮದೇಮ** ಸಂತೋಷ ಪಡುತ್ತಿರುವಂತಾಗಲಿ.

ವಿಶ್ವೇದೇವತೆಗಳೂ ದ್ಯಾವಾಪೃಥ್ವಿಗಳ ರಕ್ಷಕನಾದ ಅಗ್ನಿಯೂ ನನ್ನ ಅಧ್ಯಾತ್ಮ ಯಜ್ಞದಲ್ಲಿ ಭಾಗವಹಿಸಿ ವೃದ್ಧಿಯಾಗುವಂತೆ ನೆರವಾಗಲಿ. ಮನಮುಟ್ಟುವ ನನ್ನ ಸ್ತೋತ್ರಗಳನ್ನು ಆಲಿಸಲಿ. ನಾನು ನಿಂದನೀಯ ಮಾತುಗಳನ್ನಾಡದೆ ನಿಮ್ಮ ಅಂತರಂಗಕ್ಕೆ ಸಮೀಪದಲ್ಲಿ ಸುಖದಿಂದಿದ್ದು ಸಂತೋಷದಿಂದಿರುವಂತಾಗಲಿ.

*ಅಗ್ನಿಯೊಡವರಿದೆಲ್ಲ ನೆಲಬಾನ್ದೇವತೆಗಳಿಗೆ ನಲ್ಮೆಯಿಂ–*
*–ದೆಮ್ಮ ದಿವ್ಯಸ್ತುತಿಗಳಂ ಕೇಳಿಸಿದೆಪೆವು ಶ್ರುತಿಮೂಲಮಂ ।*
*ಕೇಳುಗೆಮ್ಮಯ ನುತಿಗಳಂ ಸುರರೆಲ್ಲರಂತೆಯೆ ದೇವರಂ*
*ಕೀಳ್ಗರೆವ ದುಷ್ಕೀತರಂ ದಯೆಗೆಯ್ಯದಿರ್ಕೆ ಮಹೋನ್ನತರ್ ॥*

॥ ವಸಿಷ್ಠವ್ರತೇ ದ್ವೇ । ದ್ವಯೋರ್ವಸಿಷ್ಠಸ್ತ್ರಿಷ್ಟುಬಿನ್ದ್ರಃ ॥

೨೦ ೦ ೦ — ೧
೧೧೪.೧. ಹಾಉಹಾಉಹಾಉ । ಊಽ೨ । ೩ । ಷಿ । ೩ । ಇ
೨ ೧ ೨ ೧೦ ೨೩೪೫ ೨
ಯಾಹಾಉ । ೩ । ಉದುಬ್ರಹ್ಮಾ । ಣೇಽ೩ಐರ । ತಶ್ರವಸ್ಯಾ ॥ ಇ
೧ ೨ ೧ ೨೦ ೩ ೪ ೫ ೨೦ ೧೦
ನ್ದ್ರ೮\ಸಮಾ । ಯೇ೯ಽ೩ಮಹ । ಯಾವಸಿಷ್ಠಾ ॥ ಆಯೋವಿಶ್ವಾ ।
೨ ೧ ೨೦ ೩ ೪೦ ೫ ೨ ೧ ೦ ೨ ೧೦ ೨೦ ೩
ನೀಽ೩ಶ್ರವ । ಸಾತತಾನಾ ॥ ಉಪಶ್ರೋತಾ । ಮಈವ । ತೋವ
೪೦ ೫ ೨೦ ೦ ೦ — ೧
ಚಾಜ್‌ಸೀ । ಹಾಉಹಾಉಹಾಉ । ಊಽ೨ । ೩ । ಷಿ । ೩ । ಇ
೨ ನ ೨ ೧೧೧
ಯಾಹಾಉ । ೨ । ಇಯಾಽ೩ಹಾಉ । ವಾಽ೩ ॥ ಈಽ೨೩೪೫ ॥

*ದೀ – ೧೬ / ಪ – ೩೪ / ಮಾ – ೧೪ / ಫ್ರೀ ॥ ೬.೧೯೫ ॥*

೨೦ ೦ ೦ —
೧೧೪.೨. ಹಾಉಹಾಉಹಾಉ । ಊಽ೨ । ೩ । ಷಿ । ೩ ।
೧೦ ೦ ೨ ೧೦ ೦ ೨
ಇಯೋ । ೩ । ಇಯೋವಾ । ೩ । ಇಯೋವಾಹಾಇ । ೩ ।
೧ ೭ ೧ ೨ ೧೦ ೦ ೨ ೧೦ ೦ ೨
ಉದುಽ೨ । ೨ । ಉದು । ಉದೋವಾ । ೩ । ಉದೋವಾಹಾ
೧ ೨ ೧೦ ೨ ೧೦
ಇ । ೩ । ಬ್ರಹ್ಮಾ । ಣೇಽ೩ಐರ । ತಶ್ರವಸ್ಯಾ । ಸ್ಯಾ । ಸ್ಯಾ । ಸ್ಯೋ

೦ ೦ ೦ ೨೦ ೧ ೭ ೧
ವಾ । ೩ । ಸ್ತ್ಯೋ೯ವಾಹಾಇ । ೩ ॥ ಇನ್ದ್ರಾಽ೨ಮ್ । ೨ । ಇ
೨ ೧೦ ೦ ೨ ೧೦ ೦ ೨ ೧
ನ್ದ್ರಮ್ । ಇನ್ದ್ರೋ೯ವಾ । ೩ । ಇನ್ದ್ರೋ೯ವಾಹಾಇ । ೩ । ಸಮಾ ।
೨ ೧ ೨೦ ೧೦ ೦
ಯೇ೯ಽ೩ಮಹ । ಯಾವಸಿಷ್ಠಾ । ಷ್ಠಾ । ಷ್ಠಾ । ಷ್ಠೋ೯ವಾ । ೩ ।
೦ ೦ ೨೦ ೧೦ ೭ಂ ೧೦ ೨೦ ೧೦
ಷ್ಠೋ೯ವಾಹಾಇ । ೩ ॥ ಆಯೋ೯ಽ೨ । ೨ । ಆಯಃ । ಆಯೋ೯
೦ ೨೦ ೧೦ ೦ ೨ ೧ ೨ ೧ ೨೦
ವಾ । ೩ । ಆಯೋ೯ವಾಹಾಇ । ೩ । ವಿಶ್ವಾ । ನೀ೯ಽ೩ಶ್ರವ । ಸಾತ
೦ ೧೦ ೦ ೦ ೦ ೨೦ ೧
ತಾನಾ । ನಾ । ನಾ । ನೋ೯ವಾ । ೩ । ನೋ೯ವಾಹಾಇ । ೩ ॥ ಉ
೭ ೧ ೨ ೧೦ ೦ ೨ ೧೦ ೦ ೨
ಪಾಽ೨ । ೨ । ಉಪ । ಉಪೋ೯ವಾ । ೩ । ಉಪೋ೯ವಾಹಾಇ ।
೧೦ ೨ ೧೦ ೨೦ ೦ ೧೦
೩ । ಶ್ರೋ೯ತಾ । ಮಘವ । ತೋ೯ವಚಾ೮ಸೀ೯ । ಸೀ೯ । ಸೀ೯ । ಸೋ೯
೦ ೦ ೦ ೨೦ ೦ ೦ ೦
ವಾ । ೩ । ಸೋ೯ವಾಹಾಇ । ೩ । ಹಾಉಹಾಉಹಾಉ । ಊಽ೨ ।
೧೦ ೦ ೨ ೧೦ ೦
೩ । ಷಿ । ೩ । ಇಯೋ೯ । ೩ । ಇಯೋ೯ವಾ । ೩ । ಇಯೋ೯ವಾ
೨ ೧೦ ನ ೨ ೧೧೧
ಹಾಇ । ೨ । ಇಯೋ೯ವಾಽ೩ಹಾಉ । ವಾಽ೩ ॥ ಈಽ೨೩೪೫ ॥

*ದೀ – ೧೫೬ / ಪ – ೧೧೪ / ಮಾ – ೪೨ / ಘ್ರಾ // ೧೦.೧೯೬ //*

ಈ ೧೯೬ನೆಯ ಸಾಮಗಾನ ಉದು ಬ್ರಹ್ಮಾಣ್ಯೈರತ ೩೩೦ನೆಯ ಋಕ್ ಮೇಲೆ ಅಧಿಷ್ಠಿತವಾಗಿದೆ.

॥ ದಶ ತೃತೀಯಃ ಖಣ್ಡಃ ॥ ೩ ॥

೧೨೦ ೧೨೦ ೩೧೨ ೩ ೧೨ ೩ ೨ ೩ ೨ ೧ ೨೦
ಸ್ತೋಭ ಪದಪಾಠ–ವಿಶ್ವಾ–ಧನಾನಿ–ಸಜ್ಜಿತ್ಯ–ಸಂ–ಜಿತ್ಯ–ವೃತ್ರಹಾ–ವೃತ್ರ–ಹಾ–ಭೂರ್ಯಾ
೧ ೨೦ ೩ ೨ ೧ ೨೦ ೩ ೨ ೩೨ ೧೨೦
ಸುತಿಃ–ಭೂ ರಿ –ಆಸುತಿಃ–ಉರುಮ್–ಘೋ ಷ ಮ್–ಚಕ್ರೇ–ಲೋಕಮ್–ವೃತ್ರಮ್–ಏಭ್ಯಃ–

೩ ೧ ೨ ೩ ೨ ೩ ೨ ೩ ೨ ೧೨೦ ೩ ೨ ೧೨೦
ಲೋಕೇಭ್ಯಃ–ನುನು–ದಾನಃ–ವೃತ್ರಮ್–ಜಘನ್ವಾನ್–ಅ ಪ –ತತ್–ವವಾರ–ಯತ್–ತಮಃ ।
ಸಾಮ ೧೯೭ ॥

॥ ಇನ್ದ್ರಸ್ಯ ಸಞ್ಜಯಮ್ । ಇನ್ದ್ರಸ್ತ್ರಿಷ್ಟುಬಿನ್ದ್ರಃ ॥

೨೦ ೦ ೦ ೧ ೦ ೦ ೨ ೧ ೨ ೧೦
೧೧೫.೧. ಹಾಉಹಾಉಹಾಉ । ವಿಶ್ವಾಧನಾನಿಸಞ್ಜಿತ್ಯವೃತ್ರಹಾ
೦ ೦ ೨ ೧ ೨ ೧ ೦ ೨ ೦
ಭೂರ್ಯಾಸುತಿಃ । ಹೋಇ । ೨–೩ । ಉರುಂಘೋಷಂಚಕ್ರೇ
೦ ೧ ೨ ೧೦ ೦ ೨೦ ೧೦ ೦
ಲೋಕಮ್ । ಹೋಇ । ೨–೩ । ವೃತ್ರಮೇಭ್ಯೋಲೋಕೇಭ್ಯೋ
೨ ೦ ೧ ೨ ೧ ೨ ೧
ನುನುದಾನಃ । ಹೋಇ । ೨–೩ । ಇನ್ದ್ರನ್ನರೋ । ನೇಽ೩ಮಧಿ ।
೨೦ ೩ ೪ ೫ ೨ ೧೦ ೨ ೧ ೨^ ೩ ೪ ೫
ತಾಹವನ್ತಾಇ ॥ ಯತ್ಪಾರಿಯಾಃ । ಯುನಜ । ತಾಇಧಿಯಸ್ತಾಃ ॥
೨೦ ೧೦ ೨ ೧ ೨೩೪೦ ೫ ೨೦ ೧೦
ಶೂರೋನೃಷಾ । ತಾಽ೩ಶ್ರವ । ಸಶ್ಚಕಾಮಾಇ ॥ ಆಗೋಮತಾಇ ।
೨ ೧೦ ೨೦ ೩ ೪ ೫ ೨೦ ೦ ೦ ೧ ೦ ೦ ೨
ವ್ರಜೇಭ । ಜಾತುವನ್ನಾಃ । ಹಾಉಹಾಉಹಾಉ । ವಿಶ್ವಾಧನಾನಿಸ
೧ ೨ ೧೦೦ ೦ ೨ ೧ ೨ ೧ ೦
ಞ್ಜಿತ್ಯವೃತ್ರಹಾಭೂರ್ಯಾಸುತಿಃ । ಹೋಇ । ೨–೩ । ಉರುಂಘೋ
೨ ೦ ೦ ೧ ೨ ೧ ೦ ೦ ೨೦ ೧೦
ಷಂಚಕ್ರೇಲೋಕಮ್ । ಹೋಇ । ೨–೩ । ವೃತ್ರಮೇಭ್ಯೋಲೋಕೇ
೦ ೨ ೦ ೧ ೨ ೧ ೦ ೦ ೦ ೧೦
ಭ್ಯೋನುನುದಾನಃ । ಹೋಇ । ೨–೨ । ವೃತ್ರಮೇಭ್ಯೋಲೋಕೇ
೦ ೨ ೦ ೧ ^ ೩ ೫೦ ೦ ೨೦
ಭ್ಯೋನುನುದಾನಃ । ಹೋಽ೨ । ವಾಽ೨೩೪ಔಹೋವಾ ॥ ಏ ।
೧ ೧ ೨ ೧೦ ೨ ೧ ೨೦ ೧ ೨೦ ೧
ವೃತ್ರಂಜಘನ್ವಾಁ\ಅಪತದ್ವಾರಯತ್ತಮಃ । ೨–೨ । ಏ । ವೃತ್ರಂ
೨ ೧೦ ೨ ೧ ೨೦ ೧ ೧ ೧ ೧
ಜಘನ್ವಾಁ\ಅಪತದ್ವಾರಯತ್ತಮಾಽ೨೩೪೫ಃ ॥

*ದೀ – ೧೧೦ । ಪ – ೫೭ । ಮಾ – ೫೫ । ಘು ॥ ೧೧.೯೭ ॥*

ಈ ೧೯೭ನೆಯ ಸಾಮಗಾನ ಇನ್ದ್ರನ್ನರೋ ನೇಮಧಿತಾ ೩೧೮ನೆಯ ಋಕ್ ಮೇಲೆ ಅಧಿಷ್ಠಿತವಾಗಿದೆ.

ಸ್ತೋಭ ಭಾಷ್ಯ – ಇನ್ದ್ರೋ ವೃತ್ರಂ ಏಭ್ಯಃ ಲೋಕೇಭ್ಯಃ ನುನುದಾನಃ ಪ್ರೇರಯನ್ ವಿಶ್ವಂ ಸರ್ವಾಣಿ ಧನಾನಿ ಸಞ್ಜಿತ್ಯ ವೃತ್ರಹಾ ಭೂರ್ಯಾಸುತಿಃ ಬಹುಧನಃ ಅನ್ನಸ್ಯ ಪ್ರಸವಿತಾ ಉರುಂ ಘೋಷಂ ಪ್ರಕೃಷ್ಟಶಬ್ದಯುಕ್ತಂ ಲೋಕಂ ಚಕ್ರೇ ಕರೋತಿ। ಯತ್ ತಮಃ ದುರ್ಭಿಕ್ಷಲಕ್ಷಣಂ ತದ್ವೃತ್ರಂ ಜಘನ್ವಾನ್ ಘ್ನನ್ ಅಪವಾರ ಅಪಸಾರಯತೀತ್ಯರ್ಥಃ ॥

ಇನ್ದ್ರನು ಪ್ರಪಂಚದ ಸಮಸ್ತ ಅನ್ನ ಧನಗಳನ್ನು ತನ್ನಲ್ಲೇ ಸಂಗ್ರಹಿಸಿಟ್ಟುಕೊಂಡು ಗರ್ಜಿಸುತ್ತಾ ಆರ್ಭಟಮಾಡುತ್ತಾ ಲೋಕಭಯಂಕರನಾಗಿರುವ ದುರ್ಭಿಕ್ಷ ಲಕ್ಷಣೋಪೇತನಾದ ವೃತ್ರಾಸುರನನ್ನು ಕೊಂದು ನಾಶಮಾಡಿ ಲೋಕವನ್ನು ದುರ್ಭಿಕ್ಷದ ದವಡೆಯಿಂದ ಪಾರುಮಾಡಿ ಲೋಕವನ್ನು ಸುಭಿಕ್ಷಗೊಳಿಸಿದನು.

## ಋಕ್ – ೬೧೧

॥ ವಾಮದೇವೋ ಗೌತಮಃ ಮಹಾಪಙ್ಕ್ತಿಃ ಲಿಂಗೋಕ್ತಾದೇವತಾಃ ॥

೧ ೨ ೩ ೧ ೨ ೩ ೧ರ ೨ರ ೩ ೨ ೩
**ಯಶೋ ಮಾ ದ್ಯಾವಾಪೃಥಿವೀ ಯಶೋ ಮೇನ್ದ್ರಬೃಹಸ್ಪತೀ । ಯ**
೧ ೨ ೩ ೧ ೨ರ ೩ ೧ ೨ ೩ ೨
**ಶೋ ಭಗಸ್ಯ ವಿನ್ದತು ಯಶೋ ಮಾ ಪ್ರತಿಮುಚ್ಯತಾಮ್ । ಯಶಸ್ವ್ಯಽ**
೨ ೩ ೨ ೩ ೧ ೨ ೩ ೧ ೨
**ಸ್ಯಾಃಸಂಸದೋಽಹಂ ಪ್ರವದಿತಾ ಸ್ಯಾಮ್** ॥ ೧೦-೬೧೧ ॥

೧ ೨ರ ೩ ೧ ೨ರ ೩ ೧ ೨ ೧ ೨ರ ೩ ೨ ೩
**ಯಶಃ–ಮಾ–ದ್ಯಾವಾ–ಪೃಥಿವೀ–ಇತಿ । ಯಶಃ–ಮಾ–ಇನ್ದ್ರಬೃಹಸ್ಪತೀ–ಇನ್ದ್ರ–**
೧ ೨ ೧ ೨ರ ೧ ೨ರ ೩ ೧ ೨ರ ೩ ೧ ೨ರ ೩
**ಬೃಹಸ್ಪತೀ–ಇತಿ ॥ ಯಶಃ–ಭಗಸ್ಯ–ವಿನ್ದತು । ಯಶಃ–ಮಾ–ಪ್ರತಿ–ಮುಚ್ಯ**
೨ ೩ ೨ ೩ ೧ ೨ ೩ ೧ ೨ರ ೩ ೨ ೩ ೨
**ತಾಮ್ ॥ ಯಶಸ್ವೀ–ಅಸ್ಯಾಃ–ಸಂಸದಃ–ಸಮ್–ಸದಃ । ಅಹಮ್–ಪ್ರವದಿತಾ–**
೩ ೨ ೩
**ಪ್ರ–ವದಿತಾ–ಸ್ಯಾಮ್** ॥ ೧೦-೬೧೧ ॥

೧೧೬.೧. ಹಾಉಹಾಉಹಾಉವಾ । ಯಶೋಮಾದ್ಯಾವಾಪೃಥಿವೀ ॥ ಹಾಉಹಾಉಹಾಉವಾ । ಯಶೋಮೇನ್ದ್ರಬೃಹಸ್ಪತೀ ॥ ಹಾಉಹಾಉಹಾಉವಾ । ಯಶೋಭಗಸ್ಯವಿನ್ದತು ॥ ಹಾಉಹಾಉಹಾಉವಾ । ಯಶೋಮಾಪ್ರತಿಮುಚ್ಯತಾಮ್ ॥ ಹಾಉಹಾಉಹಾಉವಾ । ಯಶಃಸ್ವಿಯಸ್ಯಾಸ್ಸಜ್ಸದಃ ॥ ಹಾಉಹಾಉಹಾಉವಾ । ಅಹಂಪ್ರವದಿತಾಸ್ಯಾಮ್ । ಹಾಉಹಾಉಹಾಉವಾ ॥ ಅಶ್ವಮಿಷ್ಟಯೇಽ೩ಹಸ್ ॥

*ದೀ - ೧೫ । ಪ - ೧೪ । ಮಾ - ೨೫ । ಭು ॥ ೧೨.೧೯೮ ॥*

ಸ್ತೋಭ ಭಾಷ್ಯ - ದ್ಯಾವಾಪೃಥಿವ್ಯೌ ಇನ್ದ್ರಾಬೃಹಸ್ಪತೀ ಮಾಂ ಪ್ರಾಪ್ನುತಾಂ । ಭಗಸ್ಯ ಬೋಧನಾಗುಣ ವಿಜ್ಞಾನಲಕ್ಷಣಸ್ಯ ಭಜನೀಯಸ್ಯ ಸಂಬನ್ಧಿ ಯಶಃ ಮಾಂ ಪ್ರತಿವಿನ್ದತು ಯಥಾಮೇಕೀರ್ತಿರ್ಭವೇತ್ । ಮಾ ಯಶಃ ಪ್ರತಿಮುಚ್ಯತಾಂ ಸಂಬನ್ಧ್ಯತಾಂ । ಅಸ್ಯಾಃ ಸಂಸದಃ ಯಾಗಾದಿ ಸದಸಿ ಯಶಸ್ವೀ ಸನ್ ಅಹಂ ಪ್ರವದಿತಾ ಶೋಭನವಕ್ತಾ ಸ್ಯಾಂ । ಅಶ್ವಂ ವ್ಯಾಪಕಂ ಇಷ್ಟಯೇ ಇಷ್ಟ ಸಿದ್ಧ್ಯರ್ಥಂ ಅರ್ಥಂ ದದಾತು ಇತ್ಯರ್ಥಃ ॥

ದ್ಯಾವಾಪೃಥ್ವೀ ಇನ್ದ್ರಬೃಹಸ್ಪತಿಗಳು ನನ್ನನ್ನು ತಮ್ಮವನನ್ನಾಗಿ ಮಾಡಿಕೊಳ್ಳಲಿ. ವಿಜ್ಞಾನಗುಣ ಲಕ್ಷಣವಾದ ಬೋಧನಾನುಗುಣಯುಕ್ತವೂ ಸೇವಿಸಲು ಯೋಗ್ಯವೂ ಆದ ಕೀರ್ತಿಯು ನನ್ನದಾಗಿ ಎಂದೂ ನನ್ನಿಂದ ದೂರವಾಗದಿರಲಿ. ಈ ಯಜ್ಞ ಯಾಗಗಳಲ್ಲಿ ಭಾಗವಹಿಸುವ ಋತ್ವಿಜರೂ ಸಂಸದರೂ ಕೀರ್ತಿವಂತರಾಗಿರಲಿ. ನಾನು ಯಾವಾಗಲೂ ಶುಭವಾದ ಮಾತನ್ನೇ ಆಡುತ್ತಿರುವಂತಾಗಲಿ. ನಮ್ಮ ವಿಶ್ವವ್ಯಾಪಕವಾದ ಲೋಕ ಕಲ್ಯಾಣಕರವಾದ ಇಷ್ಟಾರ್ಥಗಳ ಸಿದ್ಧಿಗೆ ಅಗತ್ಯವಾದ ಸಂಪನ್ಮೂಲಗಳ ಅನುಗ್ರಹವಾಗುತ್ತಿರಲಿ.

**ದ್ಯಾವಾಪೃಥಿವೀ** ದ್ಯಾವಾಪೃಥಿವ್ಯೋಃ ಯಶಃ ಮಾ ಸ್ತೋತಾರಮ್ ವಿನ್ದತು । ಲಭತಾಂ ಪ್ರಾಪ್ನೋತ್ವಿತ್ಯರ್ಥಃ ಕಿಂ ಚ । ಇನ್ದ್ರಬೃಹಸ್ಪತೀ ಇನ್ದ್ರಬೃಹಸ್ಪತ್ಯೋಃ ಯಶಃ ಮಾ ಮಾಂ ವಿನ್ದತು । ಕಿಂ ಚ । ಭಗಸ್ಯ ಆದಿತ್ಯಸ್ಯ ಯಶಃ ಮಾ ಮಾಂ ವಿನ್ದತು । ಬಹುಲೇನ ಯಶಸಾ ಯಶೋಮಯಾ ಮಾ ಪ್ರತಿಮುಚ್ಯತಾಮ್ । ನ ಪ್ರಮುಚ್ಯತಾಮ್ । ಅಸ್ಯಾಃ ಸಂಸದಃ ಸಮೂಹಸ್ಯ ಯಶಸ್ವೀ ಅಹಂ ಪ್ರವದಿತಾ ಸರ್ವತ್ರ ಪ್ರವಕ್ತಾ ಸ್ಯಾಮ್ ಭೂಯಾಸಮ್ ॥

**ದ್ಯಾವಾಪೃಥಿವೀ** ತಂದೆತಾಯಿಗಳಂತಿರುವ ದ್ಯುಲೋಕ ಪೃಥಿವೀಲೋಕಗಳ - ದ್ಯೌರ್ಮೇ ಪಿತಾ ಮಾತಾ ಪೃಥಿವೀ ಮಹೀಯಮ್ ಋ ೧-೧೬೪-೩೩ ॥ **ಯಶಃ ಮಾ** ಯಶಸ್ಸು ನನ್ನದಾಗಲಿ ಯಶೋರೂಪೀ ಭಗವಂತನ ಪ್ರಾಪ್ತಿಯಾಗಲಿ - ಯಸ್ಯ ನಾಮ ಮಹದ್ಯಶಃ ಯಜು ೩೨-೩ ॥ **ಇನ್ದ್ರಬೃಹಸ್ಪತೀ** ಇನ್ದ್ರ ಮತ್ತು ಬೃಹಸ್ಪತಿ ದೇವತೆಗಳ ಶಿಷ್ಯ ಹಾಗೂ ಗುರುವಿನ ರಾಜಾ ಮತ್ತು ವಿದ್ವಾಂಸನ **ಯಶಃ ಮಾ** ಕೀರ್ತಿ ನನ್ನದಾಗಲಿ. **ಭಗಸ್ಯ** ಐಶ್ವರ್ಯದ ಸಂಪತ್ತಿನ ಆದಿತ್ಯನ-ನಿರು ದೈ ೧-೧೦, ೬-೧೩, ೧೪ ನಿರು ೩-೧೬ **ಯಶಃ ಮಾ ವಿನ್ದತು** ಕೀರ್ತಿಯು ನನ್ನಲ್ಲಿ ನೆಲೆಯಾಗಲಿ. **ಯಶಃ ಮಾ ಪ್ರತಿಮುಚ್ಯತಾಮ್** ಯಶಸ್ಸು ನನ್ನನ್ನು ಎಂದೂ ಯಾವಾಗಲೂ ಬಿಟ್ಟು ಹೋಗದಿರಲಿ.

ಈ ಲೋಕ ಆಲೋಕಗಳ ಇನ್ದ್ರ ಬೃಹಸ್ಪತಿ ಆದಿತ್ಯರ ಯಶಸ್ಸು ನನ್ನದಾಗಿ ನನ್ನಲ್ಲಿ ನೆಲೆಯಾಗಿರಲಿ. ಯಶಸ್ಸು ಎಂದೂ ಯಾವಾಗಲೂ ನನ್ನನ್ನು ಬಿಟ್ಟು ಹೋಗ ದಿರಲಿ. ಇದೇ ಅರ್ಥಪುಷ್ಟಿಗಾಗಿ ಋ ೫೯೪ ಅರ ೧೦೧ ಛಾಂ. ಉ ೮-೧೪-೧ ಮಂ ಬ್ರಾ ೨-೫-೯ ಮತ್ತು ೨-೮-೧ ರಿಂದ ೧೨ ನೋಡಬಹುದು.

*ಬೃಹಸ್ಪತೀಂದ್ರರುಂ ಭೂಮಿಬಾನ್ಗಳುಂ ರವಿಯುಂ ಸದಾ ।*
*ಜಸಮಂ ನೀಳ್ಗೆ; ನಾಮೆಂದುಂ ನೀಗದಿರ್ಕೆ ಜಸಂಗಳಂ ।*
*ಅಂತೆಯೇ ಸಂಘದೊಳ್ ನಮ್ಮ ಮಾತುಗಳ್ ಕೀರ್ತಿಗಕ್ಕೆ ಮೇಣ್ ॥*

೨ ೩೨ ೨ ೩ ೨
ಸ್ತೋಭ ಪದಪಾಠ - ಕ್ಷೌ-ವ್ರತಮ್-ಸ್ವಃ-ಶಕುನಃ । ಸಾಮ ೧೯ ॥

॥ ಪ್ರಜಾಪತೇಸ್ತ್ರಯಸ್ತ್ರಿಂಶತ್ ಸಮ್ಮಿತಮ್ । ಪ್ರಜಾಪತಿರ್ವಿರಾಡಿನ್ದ್ರಃ ॥

೨ ೨ ೧೦ ೨ ೦
**೧೧೭.೧. ಏऽ೩೧ । ೪ । ಪ್ರವೋಮಹಾ೩ । ಮಹೇವೃಧಾ೩ಭ**
೩ ೫ ೧ ೨ ೨ ೧೦
**ರಾऽ೨೩೪ಧ್ವಾಮ್ । ಕ್ಷೌ । ೪ ॥ ಏऽ೩೧ । ೪ । ಪ್ರಚೇತಸಾ೩ ।**
೨ ೩ ೫ ೧ ೨
**ಪ್ರಸುಮತಾ೩ಜ್ಕೃಣೂऽ೨೩೪ಧ್ವಾಮ್ । ಕ್ಷೌ । ೪ ॥ ಏऽ೩೧ । ೪ ।**

೨ ೧ ೦ ೨ ೩ ೫ ೧
ವಿಶಽಪೂರ್ವಾಇಃ । ಪ್ರಚರಚರ್ಷಣಾಽ೨೩ಳಇಪ್ರಾಃ । ಕ್ರೌ । ಳ ॥
೨ ೨ ^ ೩ ೫೦ ೦ ೨೦
ಏಽ೩೧ । ೨ । ಏಽ೩೧೨ । ಆಽ೨೩ಳ । ಔಹೋವಾ ॥ ಏ । ವ್ರ
೧ ೦ ೨೦ ೧
ತಮೇಸುವರೇಶಕುನಃ ॥

*ದೀ - ೯ । ಪ - ೩೭ । ಮಾ - ೧೧ । ಥ ॥ ೧೩.೧೯೯ ॥*

ಈ ೧೯೯ನೆಯ ಸಾಮಗಾನ ಪ್ರವೋ ಮಹೇಮಹೇವೃಧೇ ೩೨೮ನೆಯ ಋಕ್ ಮೇಲೆ ಅಧಿಷ್ಠಿತವಾಗಿದೆ.

॥ ಪ್ರಜಾಪತೇಶ್ಚತುಸ್ತ್ರಿಂಶತ್ ಸಮ್ಮಿತಮ್ । ಪ್ರಜಾಪತಿಸ್ತ್ರಿಷ್ಟುಬಿನ್ದ್ರಃ ॥

೧ ― ೧೦ ೦ ೦ ೦ ೨೦
೧೧೮.೧. ಏಽ೨ । ೫ । ಯೋವಾ । ೫ । ಯೋವಾಹಾಇ । ೫ ।
೧ ೨ ೧ ೨೦ ೩ ೪ ೫ ―
ಇನ್ದ್ರನ್ನರೋ । ನೇಽ೩ಮಧಿ । ತಾಹವನ್ತಾಇ । ಏಽ೨ । ೫ ।
೧೦ ೦ ೦ ೦ ೨೦ ೦ ನ ೨
ಯೋವಾ । ೫ । ಯೋವಾಹಾಇ । ೪ । ಯೋವಾಽ೩ಹಾಉ ।
೧ ― ೧೦ ೦ ೦ ೦ ೨೦
ವಾ । ಕ್ರೌ । ೩ ॥ ಏಽ೨ । ೫ । ಯೋವಾ । ೫ । ಯೋವಾಹಾಇ ।
೧೦ ೨ ೧ ೨^ ೩ ೪ ೫ ―
೫ । ಯತ್ಪಾರಿಯಾಃ । ಯುನಜ । ತಾಇಧಿಯಸ್ತಾಃ । ಏಽ೨ । ೫ ।
೧೦ ೦ ೦ ೦ ೨೦ ೦ ನ ೨
ಯೋವಾ । ೫ । ಯೋವಾಹಾಇ । ೪ । ಯೋವಾಽ೩ಹಾಉ ।
೧ ― ೧೦ ೦ ೦ ೦ ೨೦
ವಾ । ಕ್ರೌ । ೩ ॥ ಏಽ೨ । ೫ । ಯೋವಾ । ೫ । ಯೋವಾಹಾ
೧೦ ೨ ೧ ೨೩೪೦ ೫ ―
ಇ । ೫ । ಶೂರೋನೃಷಾ । ತಾಽ೩ಶ್ರವ । ಸಶ್ಚಕಾಮಾಇ । ಏಽ೨ ।
೧೦ ೦ ೦ ೦ ೨೦ ೦ ನ
೫ । ಯೋವಾ । ೫ । ಯೋವಾಹಾ ಇ । ೪ । ಯೋವಾಽ೩
೨ ೧ ― ೧೦ ೦
ಹಾಉ । ವಾ । ಕ್ರೌ । ೩ ॥ ಏಽ೨ । ೫ । ಯೋವಾ । ೫ ।

೦ ೦ ೨೦ ೨೦ ೧೦ ೨ ೧೦ ೨೦ ೩ ೪
**ಯೋವಾಹಾಇ । ಔ । ಆಗೋಮತಾಇ । ವ್ರಜೇಭ । ಜಾತುವ**

ಔ ___ ೧೦ ೦ ೦ ೦ ೨೦
**ನ್ನಾಃ । ಏ೭೨ । ಔ । ಯೋವಾ । ಔ । ಯೋವಾಹಾಇ । ೪ ।**

೦ ನ ೨ ೦ ೧ ೦ ೨೦ ೧
**ಯೋವಾ೭೩ಹಾಉ । ವಾ ॥ ಏ । ವ್ರತಮೇಸುವರೇಶಕುನಃ ॥**

*ದೀ - ೨೦೪ । ಪ - ೧೪೭ । ಮಾ - ೪೮ । ಥೈ ॥ ೧೪.೨೦೦ ॥*

ಈ ೨೦೦ನೆಯ ಸಾಮಗಾನ ಇನ್ದ್ರನ್ನರೋ ನೇಮಧಿತಾ ೩೧೮ನೆಯ ಋಕ್ ಮೇಲೆ ಅಧಿಷ್ಠಿತವಾಗಿದೆ.

ಸ್ತೋಭ ಭಾಷ್ಯ – ತ್ರಯಸ್ತ್ರಿಂಶತ್ ಸಂಮಿತಂ । ಸ್ತೋಭತ್ರಿಂಶತಾ ಋಕ್ಪಾದತ್ರಯೇಣ ಚ । ಕ್ಷ್ಣೌ ಶಬ್ದೇ ಸ್ತುತಿ ಲಕ್ಷಣೇ ಸುಮತಿಂ ಕೃಣುಧ್ವಂ ದೇವಾ ಇತ್ಯನ್ವಯಃ । ಇನ್ದ್ರಾದಯೋ ದೇವಾಃ । ಏ ಯೋವಾ ಯೋವಾಹಾಇ ಪಾದಸ್ಯಾದೌ ಪಶ್ಚಾತ್ ಸ್ತೋಭಾಸ್ತ್ರಿಂಶತ್ । ಪಾದಾಃ ಕ್ಷ್ಣೌಚೇತಿ ಚತ್ವಾರ ಇತಿ ಪ್ರತಿಪಾದಂ ಚತುಸ್ತ್ರಿಂಶತ್‌ಸಂಖ್ಯಯಾ ಚತುಸ್ತ್ರಿಂಶತ್ ಸಂಮಿತತ್ವಂ । ವ್ರತಂ ಅನ್ನಂ ಸ್ವಃ ಪ್ರಕಾಶಃ ಶುಕುನಃ ಅಚಿನ್ತ್ಯಶಕ್ತಿ ಭಗವಾನಿನ್ದ್ರ ಏವ ॥ ಸಾಮ ೨೦೦ ॥

ಏ ಪ್ರವಃ । ಎಂದು ಪ್ರಾರಂಭವಾಗುತ್ತಿರುವ ಅರ ೧೯೯ನೆಯ ಗಾನವು ಋಕ್ ಮನ್ತ್ರದ ಮೂರು ಪಾದಗಳಿಂದಲೂ ಮೂವತ್ತು ಸ್ತೋಭಗಳಿಂದಲೂ ಕೂಡಿ ಶೋಭಿಸುತ್ತಿದೆ. ಈ ಗಾನದಲ್ಲಿನ ಕ್ಷ್ಣೌ ಶಬ್ದವು ಸ್ತುತಿ ಲಕ್ಷಣವಾಗಿದ್ದು ಸ್ತುತಿಸುವ ನನಗೆ ಸುಮತಿಯನ್ನು ಅನುಗ್ರಹಿಸಬೇಕೆಂದು ಇನ್ದ್ರಾದಿ ದೇವತೆಗಳಲ್ಲಿ ಮೊರೆ ಇಡಲಾಗಿದೆ.

ಏ ಯೋವಾ ಯೋವಾಹಾಇ । ಎಂಬ ಅರ ೨೦೦ನೆಯ ಸಾಮಗಾನ ಪಾದದ ಮೊದಲಲ್ಲೂ ಅನಂತರದಲ್ಲೂ ಇರುವ ೩೦ ಸ್ತೋಭಗಳು ಕ್ಷ್ಣೌ ಎಂಬ ನಾಲ್ಕು ಪಾದಗಳಲ್ಲಿ ಅಲಂಕೃತವಾಗಿದ್ದು ವ್ರತರೂಪವಾದ ಅನ್ನವೂ ಸ್ವಃ ಪ್ರಕಾಶ ತೇಜಸ್ಸೂ ಅಚಿನ್ತ್ಯ ಶಕ್ತಿಯೂ ಭಗವಂತನಾದ ಇನ್ದ್ರನದೇ ಎಂದು ಸ್ತುತಿಸಲಾಗಿದೆ.

೧೨೦ ೧ ೨೦ ೩ ೨ ೩ ೧೨ ೩ ೨ ೧೨೦
ಸ್ತೋಭ ಪದಪಾಠ – ಕಪೌ–ಜ್ಯೋತಿಃ–ಪತ–ಸ್ವಃ–ಪತ–ಅನ್ತರಿಕ್ಷಮ್–ಪೃಥಿವೀಮ್–ಪಙ್ಕ್ತ
೩೧೨ ೩ ೧೨ ೧ ೨೦ ೧ ೨ ೧೨೦
–ಪ್ರದಿಶಃ–ಪ್ರ–ದಿಶಃ–ಋಷೀನ್–ದೇವಾನ್–ವರ್ಣಮ್ । ಸಾಮ ೨೦೧ ॥

೨೦ ೦ ೦ ೧ ೨ ೧ ೨
೧೧೯.೧. ಹಾಉಹಾಉಹಾಉ । ಹಹಾಉ । ೩ । ಹಹಹಾಉ ।

೧ ೨ ೧ ೨
೩ । ಕಪಾಽ೨೩ಉ । ೩ । ಹಾಽ೩ಓಽ೨೩ । ೨ । ಹಾಽ೩೧ಉ

೧ ೦ ೦ ೨ ೧
ವಾಽ೨ । ಅಭಿತ್ವಾಶೂರನೋಽ೩ । ಆಉ । ವಾಽ೨೩ । ನೂಽ೨

೫ ೨೦ ೦ ೧೦ ೨ ೧ ೨೦ ೧ ೨ ೧೦
೩೪ಮಾಃ । ಈಡಾ । ೩ । ಜ್ಯೋತಿಷ್ಪತಸ್ತ್ವಽಪತಾನ್ತರಿಕ್ಷಂಪೃಥಿವೀಂ

೨ ೧ ೨ ೧ ೦ ೨೦ ೧೦ ೦ ೨
ಪಞ್ಚಪ್ರದಿಶಋಷೀನ್ದ್ದೇವಾನ್ವರ್ಣಮ್ ॥ ಅದುಗ್ಧಾಇವಧಾಽ೩೧ಉ

೫ ೨೦ ೦ ೧೦ ೨ ೧
ವಾಽ೨೩ಇ । ನಾಽ೨೩೪ವಾಃ । ಈಡಾ । ೩ । ಜ್ಯೋತಿಷ್ಪತಸ್ತ್ವಽ

೨೦ ೧ ೨ ೧೦ ೨ ೧ ೨ ೧ ೦ ೨೦ ೧೦ ೨
ಪತಾನ್ತರಿಕ್ಷಂಪೃಥಿವೀಂಪಞ್ಚಪ್ರದಿಶಋಷೀನ್ದ್ದೇವಾನ್ವರ್ಣಮ್ ॥ ಈ

೦ ೫
ಶಾನಮಸ್ಯಜಗತಸ್ಸುವಾಽ೩೧ಉವಾಽ೨೩ । ದೃಽ೨೩೪ಶಾಮ್ ।

೨೦ ೦ ೧೦ ೨ ೧ ೨೦ ೧ ೨ ೧೦ ೨ ೧ ೨
ಈಡಾ । ೩ । ಜ್ಯೋತಿಷ್ಪತಸ್ತ್ವಽಪತಾನ್ತರಿಕ್ಷಂಪೃಥಿವೀಂಪಞ್ಚಪ್ರದಿಶ

೧ ೦ ೨೦ ೧೦ ೦ ೦ ೨
ಋಷೀನ್ದ್ದೇವಾನ್ವರ್ಣಮ್ ॥ ಈಶಾನಮಿನ್ದ್ರತಾಽ೩೧ಉವಾಽ೨೩ ।

೫ ೨೦ ೦ ೧೦ ೨ ೧ ೨೦ ೧ ೨
ಸ್ಥೂಽ೨೩೪ಷಾಃ । ಈಡಾ । ೩ । ಜ್ಯೋತಿಷ್ಪತಸ್ತ್ವಽಪತಾನ್ತರಿಕ್ಷಂ

೧೦ ೨ ೧ ೨ ೧ ೦ ೨೦ ೧೦ ೨೦ ೦
ಪೃಥಿವೀಂಪಞ್ಚಪ್ರದಿಶಋಷೀನ್ದ್ದೇವಾನ್ವರ್ಣಮ್ । ಹಾಉಹಾಉ

೦ ೧ ೨ ೧ ೨ ೧
ಹಾಉ । ಹಹಾಉ । ೩ । ಹಹಹಾಉ । ೩ । ಕಪಾಽ೨೩ಉ ।

೨ ೧ ೨ ೨೦ ೧ ೦
೩ । ಹಾಽ೩ಓಽ೨೩ । ೨ । ಹಾಽ೩೧ಉವಾಽ೨ ॥ ಏ । ವ್ರತಮೇ

೨೦ ೧
ಸುವರೇಶಕುನಃ ॥ *ದೀ -೬೪ / ಪ -೫೪ / ಮಾ -೪೯ / ಧೋ ॥ ೧೫.೨೦೧ ॥*

ಈ ೨೦೧ನೆಯ ಸಾಮಗಾನವು ಅಭಿತ್ವಾ ಶೂರನೋನುಮಃ ೨೩೩ನೆಯ ಋಕ್ ಮೇಲೆ ಅಧಿಷ್ಠಿತವಾಗಿದೆ.

**ಸ್ತೋಭ ಭಾಷ್ಯ – ಕಪೌ ಕಂ ಉದಕಂ ಪಾತೀತಿ ಕಪಿಃ । ಸೂರ್ಯ ಪರ್ಜನ್ಯಾದಿಃ । ತದರ್ಥೇ ಇನ್ದ್ರ ತ್ವಾಂ ನೋನುಮಃ । ಜ್ಯೋತಿಃ ಸ್ವಃ ಅನ್ತರಿಕ್ಷಂ ಪೃಥಿವೀಂ ಪಂಚಪ್ರದಿಶಃ ಋಷೀನ್ ದೇವಾನ್ ವರ್ಣಮ್ ಬ್ರಾಹ್ಮಣಾದಿ । ಪಾತ ಪಾಲಯತೇತ್ಯರ್ಥಃ ॥ ಸಾಮ ೨೦೧ ॥**

ಭಗವಂತನಾದ ಇನ್ದ್ರನೇ ವೃಷ್ಟ್ಯಾದಿಗಳನ್ನು ಅನುಗ್ರಹಿಸುತ್ತಾ ಸ್ವರ್ಗ ಅನ್ತರಿಕ್ಷ ಪೃಥ್ವಿ ಹಾಗೂ ಎಂಟೂ ದಿಕ್ಕುಗಳನ್ನೂ ಜ್ಯೋತಿಸ್ವರೂಪವಾಗಿ ಬೆಳಗುತ್ತಾ ಬ್ರಾಹ್ಮಣಾದಿ ನಾಲ್ಕೂ ವರ್ಣದವರನ್ನು ಪಾಲಿಸುತ್ತಿರುವ ನಿನಗೆ ನಮಸ್ಕಾರಗಳು । ಸಾಮ ೨೦೧ ॥

೩ ೨ ೧ ೧೨೦ ೧೨೦
ಸ್ತೋಭ ಪದಪಾಠ – ಹಾಉವಾಕ್–ಆಯುಃ–ಯನ್–ಆಯುಃ–ವಯಃ ॥

॥ ಯುಗ್ಯಞ್ಚ ದಶಸ್ತೋಭಮ್ । ಜಮದಗ್ನಿಸ್ತ್ರಿಷ್ಟುಬಿನ್ದ್ರಃ ॥

೨೦ ೦ ೦ ೩೦೨೦^ ೦ ೩೦ ೦
**೧೨೦.೧. ಹಾಉಹಾಉಹಾಉ । ಓಹಾ । ೩ । ಹಾಓವಾ । ೩ ।**
೧ __ ೧ __ ೦ ೧೦ ೧೦
**ಊಽ೨ । ೩ । ಓಽ೨ । ೩ । ಹಾಉವಾಕ್ । ೩ । ಆಯು**
೨೦೦ ೧೦
**ರ್ಯನ್ । ೩ । ಏಆಯುಃ । ೩ । ಆಯುಃ । ೩ । ವಯಾಃ । ೨ ।**
೦ ೦ ೦ __ ೧ ೦ ೦
**ವಯಃ । ಇನ್ದ್ರನ್ನರೋನೇಮಧಿತಾಹವಾಽ೨ನ್ತಾಇ ॥ ಯತ್ಪಾರ್ಯಾ**
೦ __ ೧ ೦ ೦ ೦ ೦ __ ೧
**ಯುನಜತೇಧಿಯಾಽ೨ಸ್ತಾಃ ॥ ಶೂರೋನೃಷಾತಾಶ್ರವಸಶ್ಚಕಾಽ೨ಮಾ**
೦ ೦ ೦ ೦ __ ೧ ೨೦ ೦ ೦
**ಇ ॥ ಆಗೋಮತಿವ್ರಜೇಭಜಾತುವಾಽ೨ನ್ನಾಃ । ಹಾಉಹಾಉಹಾ**
^ ೩೦೨೦^ ೦ ೩೦ ೦ ೧ __ ೧ __
**ಉ । ಓಹಾ । ೩ । ಹಾಓವಾ । ೩ । ಊಽ೨ । ೩ । ಓಽ೨ । ೩ ।**
೨೦ ೧೦ ೦ ೨೦೦ ೧೦
**ಹಾಉವಾಕ್ । ೩ । ಆಯುರ್ಯನ್ । ೩ । ಏಆಯುಃ । ೩ । ಆ**

^ ೩ ೫೦ ೦

ಯುಃ । ೩ । ವಯಾಃ । ೨ । ವಾಽ೨ । ಯಾಽ೨೩೪ । ಔಹೋ

೨೦ ೦ ೧೦ ೨೧ ೨೦ ೧೦ ೦ ೦ ೩ ೧೧

ವಾ ॥ ಏ । ಆಯುರ್ಧಾಅಸ್ಮಭ್ಯಂವರ್ಚೋಧಾದೇವೇಭ್ಯಾಽ೨೩೪

೧

೫ಃ ॥ *ದೀ – ೯೫ / ಪ – ೬೪ / ಮಾ – ೫೯ / ಭೋ ॥ ೧೬.೨೦೨ ॥*

ಈ ೨೦೨ನೆಯ ಸಾಮಗಾನ ಇನ್ದ್ರನ್ನರೋನೇಮಧಿತಾ ೩೧೮ನೆಯ ಋಕ್ ಮೇಲೆ ಅಧಿಷ್ಠಿತವಾಗಿದೆ.

ಸ್ತೋಭ ಭಾಷ್ಯ – ದಶಸ್ತೋಭಯೋಗಾತ್ ದಶಸ್ತೋಭಮ್ । ಆಯುರಾ ದೇಯೋರ್ ಜನಾತ್ ಯುಗ್ಯಮ್ । ಇನ್ದ್ರ ಪ್ರಸಾದಾತ್ ವಾಕ್ ಆಯುಃ ಯನ್ ಪ್ರಾಣಃ ಪ್ರವಹನ್ ಶರೀರೇವರ್ತಮಾನಃ ಆಯುರ್ಜೀವನಂ ಆಯುಃ ಪುತ್ರಾದಿ ವಯೋಽನ್ನಂ ಭವತು । ಆಯುರ್ಧಾ ಅಸ್ಮಭ್ಯಂ ಬಲದಾತಾ ದೇವೇಭ್ಯಃ ಇನ್ದ್ರಿಯೇಭ್ಯಃ ವರ್ಚೋಧಾದೀಪ್ತೇರ್ಧಾತಾಭವ ॥ ಸಾಮ ೨೦೨ ॥

ಭಗವಂತನಾದ ಇನ್ದ್ರನ ಅನುಗ್ರಹದಿಂದ ಆಯುಃಪರ್ಯನ್ತ ಶರೀರದಲ್ಲಿ ಸದಾ ಪ್ರಾಣವು ಪ್ರವಹಿಸುತ್ತಿದ್ದು ಶಾರೀರಕ ಬಲವೂ ಪುತ್ರಾದಿ ಸಂತಾನ ಸೌಭಾಗ್ಯವೂ ವಾಗಾದಿ ಇನ್ದ್ರಿಯಗಳ ದೀಪ್ತವಾದ ಪಟುತ್ವವೂ ಜೀವನಿಗೆ ಲಭ್ಯವಾಗಿರಲಿ.

## ಋಕ್ – ೬೧೨

॥ ಹಿರಣ್ಯಸ್ತೂಪ ಆಙ್ಗಿರಸಃ ತ್ರಿಷ್ಟುಬಿನ್ದ್ರಃ ॥

೧ ೨ ೩ ೨ ೩ ೩ಕ೨೦ ೩ ೧ ೨ ೩ ೧ ೨ ೩ ೧ ೨ ೩ ೧ ೨

ಇನ್ದ್ರಸ್ಯ ನು ವೀರ್ಯಾಣಿ ಪ್ರವೋಚಂ ಯಾನಿ ಚಕಾರ ಪ್ರಥಮಾನಿ

೩ ೨ ೨ ೩ ೨ ೩ ೨ ೩ ೧ ೨ ೩ ೨ ೩ ೧ ೨ ೩ ೧ ೨

ವಜ್ರೀ । ಅಹನ್ನಹಿಮನ್ವಪಸ್ತತರ್ದ ಪ್ರ ವಕ್ಷಣಾ ಅಭಿನತ್ ಪರ್ವತಾ

ನಾಮ್ ॥ ೧೧-೬೧೨ ॥

೧ ೨೦ ೩ ಕ೨ ೩ ೧ ೨೦ ೩ ೧ ೨ ೩ ೧ ೨ ೩

ಇನ್ದ್ರಸ್ಯ–ನು–ವೀರ್ಯಾಣಿ–ಪ್ರ–ವೋಚಮ್ । ಯಾನಿ–ಚಕಾರ–ಪ್ರಥಮಾನಿ–ವ

೨ ೧೨೦ ೧೨೦ ೧೨೦ ೩ ೨ ೩ ೨ ೩೧ ೨ ೩
ಜ್ರೇ ॥ ಅಹನ್–ಅಹಿಮ್–ಅನು–ಅಪಃ–ತತರ್ದ । ಪ್ರ–ವಕ್ಷಣಾಃ–ಅಭಿನತ್–
೧೨೦
ಪರ್ವತಾನಾಮ್ ॥ ೧೧-೬೧೨ ॥

೩ ೧೨೦ ೩ ೧೨೦ ೩ ೧೨ ೩ ೧೨ ೩
ಸ್ತೋಭ ಪದಪಾಠ – ವೃತ್ರಹತ್ಯಾಯ–ವೃತ್ರ–ಹತ್ಯಾಯ–ಅಧೃಷ್ಣವೇ–ಅ–ಧೃಷ್ಣವೇ–ಅಪೂ
೧೨ ೩ ೧೨ ೩ ೨ ೩ ೨ ೩ ೩೧೨ ೩೧ ೨ ೧
ರವೇ–ಅ–ಪೂರವೇ–ಪೃಥಿವೀಂ–ಚ–ವಿ–ವರ್ತಯ–ಅನ್ತರಿಕ್ಷಮ್– ಸು –ಧಾರಯಾ । ದಿ
೨೦ ೩ ೧೨೦ ೩ ೨ ೩ ೨ ೩ ೨ ೩
ವಮ್–ವೇಪ–ಅವೇಪಯಃ–ಅ–ವೇಪಯಃ–ವೃತ್ರಹಾ–ವೃತ್ರ–ಹಾ–ಸಪ–ತ್ನಹಾ–ಸಪತ್ನ–
೨
ಹಾ । ಸಾಮ ೨೦೩ ॥

॥ ವಾರ್ತ್ರಘ್ನಮ್ । ಇನ್ದ್ರಸ್ತ್ರಿಷ್ಟುಬಿನ್ದ್ರಃ ॥

೨ ೧ ೦ ೨ ೧ ೦
೧೨೧.೧. ವೃತ್ರಹತ್ಯಾಯಹೋ೯ಇ । ೩ । ಅಧೃಷ್ಣವೇಹೋ೯ಇ ।
೨ ೦ ೧ ೦ ೨ ೦ ೧ — ೧೦
೩ । ಅಪೂರವೇಹೋ೯ಇ । ೨ । ಅಪೂರಾವಾಽ೨ಇ । ಪೃಥಿವೀ
೦ ೨ ೧ ೦ ೨ ೧
ಇ್ಟಾಹೋ೯ಇ । ೩ । ವಿವರ್ತ್ತಯಾಹೋ೯ಇ । ೨ । ವಿವರ್ತ್ತಾ
— ೧ ೨ ೦ ೧ ೦
ಯಾಽ೨ । ಅನ್ತರಿಕ್ಷ೮ಹೋ೯ಇ । ೩ । ಸುಧಾರಯಾಹೋ೯ಇ । ೨ ।
೨ ೦ ೧ — ೧೦ ೦ ೨ ೦ ೧ ೦
ಸುಧಾರಾಯಾಽ೨ । ದಿವಂವೇಪಾಹೋ೯ಇ । ೩ । ಅವೇಪಯೋ
೨ ೦ ೧ — ೧ ᑌ
ಹೋ೯ಇ । ೨ । ಅವೇಪಾಯಾಽ೨ಃ । ಹೋ೯ಇ । ೨ । ಹುವೇಽ೨ ।
— ೧ ೨ ೧ ೨ ೧ ೨
ಹಾಽ೩೧ಉವಾಽ೨ । ಇನ್ದ್ರಽ೨ । ೨ । ಇನ್ದ್ರ । ಸ್ಯನೂ । ೨ । ಸ್ಯ
೧ — ೦ ೧೦ ೨ ೧ ೨
ನೂಽ೩ । ಆಉ । ವಾಽ೨ । ವೀರ್ಯಾಣಿ । ಪ್ರವಾ । ೨ । ಪ್ರ
೧೧೧ ೧೦ ೨
ವಾಽ೩೧ಉ । ವಾಽ೨೩ । ಚಾಽ೨೩ಳಔಮ್ ॥ ಯಾನಿಽ೨ । ೨ ।

೧೦ ೨ ೧ ೨ — ೧೦ ೨
ಯಾನಿ । ಚಕಾ । ೨ । ಚಕಾಽ೩೧ಉ । ವಾಽ೨ । ರಪ್ರಥಮಾ । ನಿ

೧ ೨ ೧೧೧ ೧೨
ವಾ । ೨ । ನಿವಾಽ೩೧ಉ । ವಾಽ೨೩ । ಜ್ರೀಽ೨೩೪೫ ॥ ಅಹಽ

೧ ೨ ೧ ೨
೨ನ್ । ೨ । ಅಹನ್ । ಅಹಾಇಮ್ । ೨ । ಅಹಾಽ೩೧ಉ ।

— ೧೨೧ ೨೧ ೨
ವಾಽ೨ । ಅನ್ವಪಃ । ತತಾ । ೨ । ತತಾಽ೩೧ಉ । ವಾಽ೨೩ ।

೧೧೧ ೧೨ ೧ ೨೧ ೨
ದಾಽ೨೩೪೫ ॥ ಪ್ರವಽ೨ । ೨ । ಪ್ರವ । ಕ್ಷಣಾಃ । ೨ । ಕ್ಷ

— ೧೨ ೧ ೨೧ ೨
ಣಾಽ೩೧ಉ । ವಾಽ೨ । ಅಭಿನತ್ಪಾ । ರ್ವತಾ । ರ್ವತಾಽ೩೧ಉ ।

೧೧೧ ೨ ೧ ೦ ೨
ವಾಽ೨೩ । ನಾಽ೨೩೪೫ಮ್ । ವೃತ್ರಹತ್ಯಾಯಹೋಇ । ೩ । ಅ

೧ ೦ ೨ ೦ ೧ ೦ ೨ ೦ ೧
ಧೃಷ್ಣವೇಹೋಇ । ೩ । ಅಪೂರವೇಹೋಇ । ೨ । ಅಪೂರಾ

— ೧೦೦ ೨ ೧ ೦
ವಾಽ೨ಇ । ಪೃಥಿವೀಇಷ್ಟಾಹೋಇ । ೩ । ವಿವರ್ತಯಾಹೋಇ ।

೨ ೧ — ೧ ೨ ೦ ೧
೨ । ವಿವರ್ತಾಯಾಽ೨ । ಅನ್ತರಿಕ್ಷಂಹೋಇ । ೩ । ಸುಧಾರ

೦ ೨ ೦ ೧ — ೧೦ ೦
ಯಾಹೋಇ । ೨ । ಸುಧಾರಾಯಾಽ೨ । ದಿವಂವೇಪಾಹೋಇ ।

೨ ೦ ೧ ೦ ೨ ೦ ೧ — ೧
೩ । ಅವೇಪಯೋಹೋಇ । ೨ । ಅವೇಪಾಯಾಽ೨ಃ । ಹೋಇ ।

ಉ — ೦ ೧೦ ೨ ೧೦
೨ । ಹುವೇಽ೨ । ಹಾಽ೩೧ಉವಾಽ೨ ॥ ಏ । ವೃತ್ರಹಾಸಪತ್ನಹಾ ।

೨–೩ ॥ *ದೀ – ೮೫ । ಪ – ೧೨೧ । ಮಾ – ೭೬ । ಪೂ ॥ ೧೭.೨೦೩ ॥*

ಸ್ತೋಭ ಭಾಷ್ಯ – ಇನ್ದ್ರಸ್ಯ ಸ್ವಭೂತಾನಿ ವೀರ್ಯಾಣಿ ವೀರಕರ್ಮಾಣಿ ಪ್ರವೋಚಂ ಕಥಯಾಮಿ । ಯಾನಿ ಪ್ರಥಮಾನಿ ಮುಖ್ಯಾನಿ ವಜ್ರೀ ಚಕಾರ ಕರೋತಿ। ಕಾನೀ ತಾನೀತ್ಯಾಹ – ಅಹಿಂ ಮೇಘಮ್ ಅಹನ್ ಘ್ನನ್ ಅಪಃ ನು ತತರ್ದಃ ಪ್ರೇರಯತಿ । ಪರ್ವತಾನಾಂ ಪ್ರವಕ್ಷಣಾಃ ನದೀಃ ಅಭಿನತ್ ವಿದಾರ್ಯ ಪ್ರವರ್ತಯತಿ

ವೃತ್ರಹತ್ಯಾಯ ಶತ್ರುಹನನಾಯ ತಥಾ ವೃತ್ರಾಯ ಅಘೃಷ್ಣವೇ ಅಸಮರ್ಥಾಯ ಅಪೂರವೇ ಅಪೂರ್ಣಾಯ ಇನ್ದ್ರ ವೀರ್ಯಾಣಿ ಪ್ರಬ್ರವೀಮಿ । ಭಗವನ್ ಇನ್ದ್ರ ಪೃಥಿವೀ ವಿವರ್ತಯ ಸಮ್ಯಗವಸ್ಥಾಪಯ । ಅನ್ತರಿಕ್ಷಂ ಸುಷ್ಟು ಧಾರಯ ದಿವಂ ವೇಪ ವಿಶೇಷೇಣ ಪಾಯ । ವಿಗತಪಯೋ ವೇಪಯಃ ಅವೇಪಯಃ ಪಯಸ್ವೀಸನ್ ವೃತ್ರಹಾ ಸಪತ್ನಹಾ ಚ ಭವ । ಯೇನ ದೇವತಾಽವರಣಂ ಕೃತಂ ಸಃ ವೃತ್ರಃ ತಂ ಹನ್ತೀತಿ ಸ್ಪರ್ಧನಾತ್ ವೃತ್ರಹಾ ಸಪತ್ನಹಾ ॥ ೨೦೩ ॥

ಇನ್ದ್ರ ಭಗವಂತನು ತನ್ನ ಸ್ವಪರಾಕ್ರಮದಿಂದ ನೆರವೇರಿಸಿದ ವೀರ್ಯಯುಕ್ತ ಕರ್ಮಗಳು ಹೀಗಿವೆ. ಮೇಘಗಳನ್ನುಸೀಳಿ ನೀರನ್ನು ತಂದ. ಪರ್ವತಗಳನ್ನು ಸೀಳಿ ನದಿಗಳು ಹರಿಯುವಂತೆ ಮಾಡಿದ. ಪೃಥ್ವಿಯನ್ನು ಕಾಡು ಮೇಡು ಹೊಲಗದ್ದೆ ಬಾವಿ ಕೆರೆ ನದಿ ಸಮುದ್ರ ಎಂದು ವ್ಯವಸ್ಥೆಗೊಳಿಸಿ ಸುಂದರವನ್ನಾಗಿಸಿದ. ಅನ್ತರಿಕ್ಷವನ್ನು ಅಚ್ಚುಕಟ್ಟಾಗಿ ಧಾರಣಮಾಡಿ ಸ್ವರ್ಗವನ್ನು ಸ್ಥಿರಗೊಳಿಸಿದ. ದೇವತೆಗಳನ್ನೂ ದೇವತಾ ಸ್ವರೂಪಿಯಾದ ನೀರನ್ನೂ ಆವರಿಸಿಮರೆಮಾಡಿದ್ದ ವೃತ್ರನನ್ನು ನಾಶಗೊಳಿಸಿ ವೃತ್ರಾರಿ ಎನಿಸಿದ । ಸಾಮ ೨೦೩ ॥

ವಜ್ರೀ ವಜ್ರಯುಕ್ತಃ ಇನ್ದ್ರಃ ಪ್ರಥಮಾನಿ ಪೂರ್ವಸಿದ್ಧಾನಿ ಮುಖ್ಯಾನಿ ವಾ । ಯಾನಿ ವೀರ್ಯಾಣಿ ಪರಾಕ್ರಮ ಪ್ರಯುಕ್ತಾನಿ ಕರ್ಮಾಣಿ ಚಕಾರ । ತಸ್ಯ ಇನ್ದ್ರಸ್ಯ ತಾನಿ ವೀರ್ಯಾಣಿ । ನು ಕ್ಷಿಪ್ರಂ ಪ್ರವೋಚಂ ಪ್ರಬ್ರವೀಮಿ । ಕಾನಿ ವೀರ್ಯಾಣೀತಿ ತದುಚ್ಯತೇ – ಅಹಿಂ ಮೇಘಮ್ ಅಹನ್ ಹತವಾನ್ ತದೇತದೇಕಂ ವೀರ್ಯಮ್ । ಅನು ಪಶ್ಚಾತ್ ಅಪಃ ಜಲಾನಿ ತತರ್ದ ಹಿಂಸಿತವಾನ್ । ಭೂಮೌ ಪಾತಿತವಾನಿತ್ಯರ್ಥಃ ಇದಂ ದ್ವಿತೀಯಂ ಪ್ರವೀರ್ಯಮ್ । ಪರ್ವತಾನಾಂ ಸಂಬನ್ಧಿನೀಃ ವಕ್ಷಣಾಃ ಪ್ರವಹಣಶೀಲಾಃ ನದೀಃ ಪ್ರ ಅಭಿನತ್ ಕೂಲದ್ವಯಕರ್ಷಣೇನ ಪ್ರವಾಹಿತವಾನಿತ್ಯರ್ಥಃ ಇದಂ ತೃತೀಯಂ ವೀರ್ಯಮ್ ॥

ವಜ್ರೀ ವಜ್ರಾಯುಧಯುಕ್ತನಾದ ಬಂಧನದಿಂದ ಬಿಡಿಸುವ – ವಜ್ರಃ ಕಸ್ಮಾತ್ ವರ್ಜಯತೀತಿ ಸತಃ ನಿರು ೩–೧೨ ॥ ಓಜಸ್ವಿಯಾದ – ವಜ್ರೋ ವಾ ಓಜಃ ಶ ೮–೪–೧–೨೦ ॥ ನು ತಕ್ಷಣ ಪುನಃ ಪುನಃ ಪ್ರಥಮಾನಿ ಸಾಧಿಸಿದ ಮುಖ್ಯವಾದ ಯಾನಿ ವೀರ್ಯಾಣಿ ಚಕಾರ ನಿರ್ವಹಿಸಿದ ಸಾಹಸ ಕಾರ್ಯಗಳನ್ನು ಪರಾಕ್ರಮಗಳನ್ನು ಪ್ರವೋಚಂ ಒಂದೊಂದಾಗಿ ವರ್ಣಿಸುತ್ತೇನೆ ಪ್ರಶಂಸಿಸುತ್ತೇನೆ. ಅಹಿಂ ಮೇಘವನ್ನು ಮೃತ್ಯುವೆಂಬ ಸರ್ಪವನ್ನು – ಅಹಿಃ ನಿರ್ಹ್ರಸಿತೋಪಸರ್ಗ ಆಹನ್ತೀತಿ ನಿರು ೨–೧೭ । ಅಹನ್ ಸೀಳಿದನು ಅಪಃ ಅನುತತರ್ದ ನೀರು ಮಳೆಯಾಗಿ ಕೆಳಗೆ ಬೀಳುವಂತೆ ಮಾಡಿದನು. ಬಂಧನಕ್ಕೆ ಕಾರಣವಾದ ಕಾಮಾದಿವಾಸನೆಗಳನ್ನು ನಾಶಮಾಡಿದನು – ಆಪೋವೈ ಸರ್ವೇ ಕಾಮಾಃ ಶತ. ೧೦–೫–೪–೧೫ ॥ ಪರ್ವತಾನಾಂ ಪರ್ವತಗಳಲ್ಲಿ ತೃಪ್ತಿದಾಯಕ ಜ್ಞಾನಜ್ಯೋತಿಯಾದ ವೇದವನ್ನು – ಪರ್ವ ಪುನಃ ಪೃಣಾತೇಃ ಪ್ರೀಣಾತೇರ್ವಾ ನಿರು ೧–೨೦ ॥ ಪರ್ವತೀ ಭಾಸ್ವತೀ ನಿರು ೨–೨೫ ॥ ಪರ್ವತಃ ಪರ್ವವಾನ್ ನಿರು ೧–೨೦ ॥ ತಪ್ ಪರ್ವಮರುದ್ಭ್ಯಾಮ್ ಅಷ್ಟಾ. ೫–೨–೧೨೨–

ವಾಃ ॥ ವಕ್ಷಣಾಃ ಪ್ರವಹಿಸುವ ನದಿಗಳನ್ನು ಜ್ಞಾನಾಮೃತದ ಪ್ರವಾಹವನ್ನು ಪ್ರ ಅಭಿನತ್ ದಡಗಳನ್ನು ಮಾಡಿಕೊಂಡು ಹರಿಯುವಂತೆ ಮಾಡಿದನು.

ವಜ್ರಾಯುಧಧಾರಿಯಾದ ಓಜಸ್ವಿಯಾದ ಇನ್ದ್ರ ಭಗವಂತನು ಪರಾಕ್ರಮದಿಂದ ಸಾಧಿಸಿದ ಸಾಹಸ ಕಾರ್ಯಗಳನ್ನು ವರ್ಣಿಸಿ ಪ್ರಶಂಸಿಸಲಾಗಿದೆ. ಮೇಘವನ್ನು ಸೀಳಿ ಮಳೆಸುರಿಸಿ ನದಿಗಳು ಪರ್ವತಗಳನ್ನುಸೀಳಿ ದಡಮಾಡಿಕೊಂಡು ಹರಿಯು ವಂತೆ ಮಾಡಿದನು. ಮೃತ್ಯುವೆಂಬಸರ್ಪವನ್ನು ಸೀಳಿ ಬಂಧನಕ್ಕೆ ಕಾರಣವಾದ ಕಾಮಾದಿ ವಾಸನೆಗಳನ್ನು ನಾಶಪಡಿಸಿ ತೃಪ್ತಿಯನ್ನುನೀಡುವ ವೇದವೆಂಬ ಜ್ಞಾನ ಗಂಗೆಯು ಎಲ್ಲರಿಗೂ ಉಪಯೋಗವಾಗುವಂತೆ ಹರಿಸಿದನು.

*ಮುಗಿಲ್ಗಳಂ ಸೀಳುತೆ ನೀರನುರ್ಚಿ*
*ಶೈಲೇಯಕಲ್ಲೋಲಿನಿಯಂ ದಡಕ್ಕಂ ।*
*ನಿರ್ಬಂಧಿಪಂ ವಜ್ರಿಯಮೇಯಸತ್ತ್ವಂ*
*ಶಕ್ರಂಗಡಾತಂ ಸುತಿಪಾತ್ರವೀರಂ ॥*

೩ ೧ ೨ ೩ ೧೨೦ ೧೨೦ ೩ ೧೨೦
ಅಭಿಪ್ರಘ್ನನ್ತಂ–ಅಭಿ– ಪ್ರಘ್ನನ್ತಮ್–ಓ ಜ ಸಾ–ಸ್ವೋಜಸಾ–ಸು–ಓಜಸಾ–ಅ ಸಿ –
೩ ೨ ೩ ೨ ೩ ೧೨೦ ೧೨೦ ೩ ೧೨೦ ೧ ೨೦ ೩ ೧೨೦ ೧ ೨೦
ಪ್ರಾಣಃ–ಪ್ರ–ಆನಃ–ಅಸಿ–ಅ ಸಿ –ಚಕ್ಷುಃ–ಅಸಿ–ಅ ಸಿ –ಶ್ರೋ ತ್ರ ಮ್–ಅಸಿ–ಅ ಸಿ –ಜ್ಯೋ ತಿ ಃ
೩ ೧೨೦ ೩ ೧ ೨೦ ೩ ೧೨ ೩ ೧ ೨೦ ೩ ೨
–ಅಸಿ–ಇಡಾಮ್–ಗಚ್ಛ–ಸೂರ್ಯಮ್–ಗಚ್ಛ–ಅನ್ತರಿಕ್ಷಮ್–ಗಚ್ಛ–ನಾ ಕೇ –ವಿ–ಭಾಹಿ–ಸ್ವಃ–
೩ ೧ ೨೦ ೩ ೧೨೦ ೧ ೨೦ ೩
ಗಚ್ಛ–ಜ್ಯೋ ತಿ ಃ–ಗಚ್ಛ–ಅ ತಿ –ಜ್ಯೋ ತಿ ಃ–ವಿ–ಭಾಹಿ ॥ ಸಾಮ ೨೦೪ ॥

॥ ಪ್ರಜಾಪತೇಶ್ಚಾಷ್ಟಾನಿಧನಮ್ । ಪ್ರಜಾಪತಿರ್ಬೃಹತೀನ್ದ್ರಃ ॥

೨ ೧ ೨ ೦ ೧ ೨ ೦ ೧
**೧೨೨.೧. ಅಭಿಪ್ರಘ್ನಾ । ತಮೋಽಜಸಾ । ತಮೋಽಜಾಸಾಽ೨ । ೩**
೦ ೧ ೨ ೦ ೧ ೦ ೧
**–೩ । ತಮೋಽಜಸಾ । ಸುವೋಽಜಾಸಾಽ೨ । ೨–೨ । ತಮೋಽಜಸಾ ।**
೨ ೦ ೧ ^ ೩ ೫೦ ೦ ೧ ೦ ೨೦ ೧
**ಸುವೋ । ಜಾಽ೨ । ಸಾಽ೨೩ಳ । ಔಹೋವಾ । ಅಸಿಪ್ರಾಣಏಅ**
೨೦ ೧ ೦ ^ ೩ ೫
**ಸಿ । ೩ । ಏಅಸಿ । ೩ । ಸತ್ಯಮಿತ್ಥಾವೃಷಾಽ೨ಇದಾಽ೨೩ಳಸೀ ।**
೨೦ ೧ ೨೦ ೧ ೩ ೫೦ ೦ ೧ ೦
**ಏಅಸಿ । ೨ । ಏ । ಆಽ೨ । ಸಾಽ೨೩ಳ । ಔಹೋವಾ । ಇಡಾ**

ಜ್ಗಚ್ಛಸೂರ್ಯರ್ಜಗ್ಗಚ್ಛೇ । ಡಾಜ್ಗಚ್ಛಸೂರ್ಯರ್ಜಗ್ಗಚ್ಛೇ । ಡಾಜ್ಗಚ್ಛಸೂ

ರ್ಯರ್ಜಗ್ಗಚ್ಛ ॥ ಅಭಿಪ್ರಘ್ನಾ । ತಮೋಽಜಸಾ । ತಮೋಽಜಾಸಾಽ೨ । 

೩–೩ । ತಮೋಽಜಸಾ । ಸುವ್ರೋಽಜಾಸಾಽ೨ । ೨–೨ । ತಮೋಽಜ

ಸಾ । ಸುವ್ರೋ । ಜಾಽ೨ । ಸಾಽ೨೩ಳ । ಔಹೋಽವಾ । ಅಸಿಚಕ್ಷು

ರೇಽಅಸಿ । ೩ । ಏಽಅಸಿ । ೩ । ವೃಷಜೂತಿರ್ನೋರ್ಽಽ೨ವಾಽ೨೩ಳಇ

ತಾ । ಏವಿತಾ । ೨ । ಏ । ವಾಽ೨ಇ । ತಾಽ೨೩ಳ । ಔಹೋಽವಾ ।

ಅನ್ತರಿಕ್ಷಜ್ಗಚ್ಛನಾಕೇಽವಿಭಾಹಿ । ೩ ॥ ಅಭಿಪ್ರಘ್ನಾ । ತಮೋಽಜಸಾ ।

ತಮೋಽಜಾಸಾಽ೨ । ೩–೩ । ತಮೋಽಜಸಾ । ಸುವ್ರೋಽಜಾಸಾಽ೨ ।

೨–೨ । ತಮೋಽಜಸಾ । ಸುವ್ರೋ । ಜಾಽ೨ । ಸಾಽ೨೩ಳ । ಔ

ಹೋಽವಾ । ಅಸಿಶ್ರೋತ್ರಮೇಽಅಸಿ । ೩ । ಏಽಅಸಿ । ೩ । ವೃಷಾ

ಹ್ಯಗ್ರಶೃಣ್ವೆಷೇಪರಾಽ೨ವಾಽ೨೩ಳತೀ । ಏವತಿ । ೨ । ಏ । ವಾಽ

೨ । ತಾಽ೨೩ಳ । ಔಹೋಽವಾ । ಸ್ವರ್ಗಚ್ಛಜ್ಯೋತಿರ್ಗಚ್ಛ । ೩ ॥

ಅಭಿಪ್ರಘ್ನಾ । ತಮೋಽಜಸಾ । ತಮೋಽಜಾಸಾಽ೨ । ೩–೩ । ತ

ಮೋಽಜಸಾ । ಸುವ್ರೋಽಜಾಸಾಽ೨ । ೨–೨ । ತಮೋಽಜಸಾ । ಸು

ವ್ರೋ । ಜಾಽ೨ । ಸಾಽ೨೩ಳ । ಔಹೋಽವಾ । ಅಸಿಜ್ಯೋತಿರೇಽಅ

ಸಿ । ೩ । ಏಽಅಸಿ । ೩ । ವೃಷೋಽಅರ್ವಾವತಾಽ೨ಇಶ್ರೂಽ೨೩ಳ

೫ ೨೦ ೧ ೨೦ ೧ ^ ೩ ೫೦ ೦
ತಾಃ । ಏಶ್ರುತಃ । ೨। ಏ । ಶ್ರೂ೨ । ತಾ೨೩೪ । ಔಹೋವಾ ॥
೧ ೦ ೦ ೨೦ ೧ ೦ ೦ ೨೦ ೧೩
ಅತಿಜ್ಯೋತಿರ್ವಿಭಾಹ್ಯೇಅತಿ । ೨ । ಅತಿಜ್ಯೋತಿರ್ವಿಭಾಹ್ಯೇಅತೀ೬
೧೧೧
೨೩೪೫ ॥ *ದೀ – ೧೪೬ / ಪ – ೧೩೬ / ಮಾ – ೪೦ / ಕೌ ॥ ೧೮.೨೦೪ ॥*

ಈ ೨೦೪ನೆಯ ಸಾಮಗಾನವು ಸತ್ಯಮಿತ್ಥಾ ವೃಷೇದಸಿ ೨೬೩ನೆಯ ಋಕ್ ಮೇಲೆ ಅಧಿಷ್ಠಿತವಾಗಿದೆ.

ಸ್ತೋಭ ಭಾಷ್ಯ – ಪಾದ ಚತುಷ್ಟಯಸ್ಯ ಆದೌ ಅನ್ತೇ ಚ ನಿಧನ ಭಕ್ತಿಯೋಗಾತ್ ಅಷ್ಟಾನಿಧನಂ । ಇನ್ದ್ರ ತ್ವಾಂ ಓಜಸಾ ಶತ್ರುಂ ಅಭಿಪ್ರಘ್ನನ್ತಂ ಸ್ವೋಜಸಾ ಶೋಭನೇನ ವಿಜ್ಞಾನಾಖ್ಯೇನ ಓಜಸಾ ಸ್ತುಮಃ । ಪ್ರಾಣಃ ಚಕ್ಷುಃ ಶ್ರೋತ್ರಂ ಜ್ಯೋತಿಃ ಇನ್ದ್ರ ತ್ವಂ ಮೇ ಅಸಿ । ಇಡಾಮ್ ಅನ್ನಂ ಸೂರ್ಯಂ ಅನ್ನಂ ಚ ಪಾಲನಾರ್ಥಂ ಗಚ್ಛ । ಅನ್ತರಿಕ್ಷಂ ಗಚ್ಛ ರಸಾನುಪ್ರದಾನಾರ್ಥಂ ನಾಕೇ ಸ್ವರ್ಗೇ ವಿಭಾಹಿ ದೀಪ್ತೋಭವ । ಸ್ವಃ ದಿವಂ ಗಚ್ಛ । ಜ್ಯೋತಿಃ ಆದಿತ್ಯಮಂಡಲಂ ಗಚ್ಛ । ಅತಿ ಜ್ಯೋತಿಃ ಸೌರಂ ತೇಜೋ ಅತಿಕ್ರಮ್ಯ ಚಿತ್ಪ್ರಕಾಶೇನ ಅನವಚ್ಛಿನ್ನೇನ ವಿಭಾಹಿ ಇತ್ಯರ್ಥಃ ॥ ಸಾಮ ೨೦೪ ॥

ಈ ಸಾಮಗಾನದ ನಾಲ್ಕೂ ಪಾದಗಳ ಪ್ರಾರಂಭದಲ್ಲೂ ಕೊನೆಯಲ್ಲೂ ನಿಧನ ಭಕ್ತಿ ಇರುವುದರಿಂದ ಇದು ಅಷ್ಟಾನಿಧನವೆಂಬ ಹೆಸರನ್ನು ಪಡೆದಿದೆ. ಇನ್ದ್ರ ಭಗವಂತನೇ ನಿನ್ನ ಓಜಸ್ಸಿನಿಂದಲೇ ಸ್ವಂತ ಸಾಹಸ ಬಲ ಪರಾಕ್ರಮಗಳಿಂದಲೇ ಶತ್ರುನಿಗ್ರಹ ಮಾಡಿರುವುದರಿಂದ ಶೋಭಾಯಮಾನವಾದ ಮಂಗಳಕರವಾದ ಸ್ತೋತ್ರ ಗಳಿಂದ ಸ್ತುತಿಸುತ್ತೇವೆ. ಕಣ್ಣೂ ಕಿವಿಯೂ ದ್ರಷ್ಟಾರನೂ ಶ್ರೋತೃವೂ ಜ್ಯೋತಿಯೂ ಅನ್ನವೂ ನೀನೇ ಆಗಿದ್ದೀಯೆ. ಅನ್ನವನ್ನು ಉತ್ಪಾದಿಸಿ ನಮ್ಮನ್ನು ರಕ್ಷಿಸಲು ಸೂರ್ಯ ನಲ್ಲಿಗೂ ವೃಷ್ಟ್ಯಾದಿ ರಸಗಳನ್ನು ನಮಗೆ ಅನುಗ್ರಹಿಸಲು ಅನ್ತರಿಕ್ಷಕ್ಕೂ ದಯಮಾಡು. ಸ್ವರ್ಗದಲ್ಲಿ ದೀಪ್ತನಾಗಿರು. ಆದಿತ್ಯಮಂಡಲದಲ್ಲಿ ಹೋಗಿ ಸೂರ್ಯನ ತೇಜಸ್ಸನ್ನು ಅತಿಕ್ರಮಿಸಿ ಚಿತ್ ಪ್ರಕಾಶದಿಂದ ಪ್ರಕಾಶಿಸು । ಸಾಮ ೨೦೪ ॥

೧ ೨೦ ೩ ೨ ೧ ೨೦ ೩ ೧ ೨೦ ೩ ೨
ವಯಃ–ಬೃಹತ್–ವಿಭ್ರಾಷ್ಟಯೇ–ವಿ–ಭ್ರಾಷ್ಟಯೇ–ವಿ ಧ ರ್ಮಣೇ–ವಿ– ಧರ್ಮಣೇ – ಸತ್ಯ
೧ ೨೦ ೧ ೨೦ ೩ ೨ ೧ ೨೦ ೩ ೧ ೨೦ ೧ ೨೦ ೩ ೨
ಮ್–ಓ ಜ ಃ–ರ ಜ ಃ–ಸ್ವಃ–ಭದ್ರಮ್–ಸುಧಾ–ಸು–ಧಾ–ಇ ಷ ಮ್–ಊ ರ್ಜ ಮ್–ಬೃಹತ್–
೧ ೨೦ ೩ ೨ ೩
ಯ ಶ ಃ–ದಿವಿ–ದಧೇ ॥

॥ ಇನ್ದ್ರಸ್ಯ ರಾಜನಮ್ । ಇನ್ದ್ರಸ್ತ್ರಿಷ್ಟುಬಿನ್ದ್ರಃ ॥

೧೨೩.೧. ಹಿಮ್ । ೩ । ಹೋ । ೩ । ಹಉ । ೩ । ಓಹಾ । ೩ । ಔಹೋಇ । ೩ । ಇನ್ದ್ರನ್ನರೋ । ನೇಽಇಮಧಿ । ತಾಹವನ್ತಾಇ । ೩–೩ । ವಯೋಬೃಹತ್ । ೩ । ವಿಭ್ರಾಷ್ಟಯೇವಿಧರ್ಮಣೇ । ೩ ॥ ಯತ್ಪಾರಿಯಾಃ । ಯುನಜ । ತಾಇಧಿಯಸ್ತಾಃ । ೩–೩ । ಸತ್ಯಮೋಜಃ । ೩ । ರಜಸ್ಸುವಃ । ೩ ॥ ಶೂರೋನೃಷಾ । ತಾಽಇಶ್ರವಸಶ್ಚಕಾಮಾಇ । ೩–೩ । ಭದ್ರಉಸುಧಾ । ೨ । ಭದ್ರಉಸುಧೇ । ಷಮೂರ್ಜಮ್ । ಇಷಮೂರ್ಜಮ್ । ೨ ॥ ಆಗೋಮತಾಇ । ವ್ರಜೇಭ । ಜಾತುವನ್ನಾಃ । ೩–೩ । ಬೃಹದ್ಯಶಃ । ೩ । ದಿವಿದಧೇಽಇಹಸ್ । ೨ । ದಿವಿದಧೇಽಇ । ಹಾಉವಾ ॥ ವಾಗೀಡಾಸೂರ್ವೋಬೃಹದ್ಭಾಽ೨೩೪೫ಃ ॥ದೀ–೬೬ । ಪ–೭೭ । ಮಾ–೪೬ । ಖೂ ॥ ೧೯.೨೦೫ ॥

ವಯೋ ಬೃಹತ್ ಮಹದನ್ನಂಪ್ರಾಪ್ತುಂ । ವಿಭ್ರಾಷ್ಟಯೇ ವಿಶೇಷೇನ ದಿಪ್ತ್ಯರ್ಥಂ ವಿಶೇಷತೋ ಧರ್ಮಸಿದ್ಧ್ಯರ್ಥಂ । ಇನ್ದ್ರ ನಃ ಅಸ್ಮಾನ್ ಭಜ । ಸತ್ಯಂ ಓಜಃ ರಜೋ ಲೋಕಂ ಸ್ವಃ ಪ್ರಕಾಶಂ ಭದ್ರಂ ಮಂಗಲಂ ಸುಧಾ ಶೋಭನಧಾರಣಾ ಇಷಮನ್ನಂ ಊರ್ಜಂ ಬಲಂ ಬೃಹದ್ಯಶಃ ಮಹತೀಂ ಕೀರ್ತಿಂ ಧೀತಿಂ ಸಂಪಾದಯ । ದಿವಿ ದ್ಯೋತನವತಿ ಸ್ಥಾನೇ ದಧೇ ಧಾರಯ । ವಾಗೀಡಾಸ್ವಃ ಬೃಹದ್ಭಾ ಇತ್ಯಾದಿ ತ್ವತ್ಪ್ರಸಾದಾತ್ ಭವತು ॥ ಸಾಮ ೨೦೫ ॥

ಮಹಾಮಹಿಮೋಪೇತವಾದ ಅನ್ನವನ್ನು ಪಡೆಯಲೂ ಅತಿಶಯ ದೀಪ್ತಿವಂತರಾಗಲೂ ಧರ್ಮಸಿದ್ಧಿಸಲೂ ಭಗವಂತನಾದ ಇನ್ದ್ರನನ್ನು ಪೂಜಿಸೋಣ ಭಜಿಸೋಣ. ಸತ್ಯ ಆತ್ಮಶಕ್ತಿ ಆ ಲೋಕ ಈ ಲೋಕಗಳ ಸುಖವನ್ನೀಯುವ ಅನ್ನ ಮಂಗಳಕರವಾದ ದೇಹಬಲ ಮಹತ್ತಾದ ಯಶಸ್ಸು ಬುದ್ಧಿಶಕ್ತಿ ಕಾಂತಿಯಿಂದ ಬೆಳಗುತ್ತಿರುವ ಸ್ವರ್ಗಲೋಕ

ಒಳ್ಳೆಯ ವಾಕ್ ಶಕ್ತಿ ಅತಿಶಯವಾದ ಕಾಂತಿ ಈ ಎಲ್ಲವೂ ಇನ್ದ್ರನ ಅನುಗ್ರಹದಿಂದ ನಮ್ಮದಾಗಲಿ । ಸಾಮ ೨೦೫ ॥

೧೨೦ ೧೨೦ ೧೨೦ ೧೨೦ ೩ ೨ ೩ ೨ ೧೨೦ ೩ ೨ ೧ ೨೦
ಅಸೌ–ಅಯಮ್–ನಮಃ–ಕಿಟ್–ಮ ನ ಃ–ಪ್ರಾಣಃ–ಪ್ರ–ಆನಃ–ಚಕ್ಷುಃ–ಶ್ರೋತ್ರಮ್–ಘೋಷಃ
೩೨ ೩ ೨ ೩ ೨ ೩೨ ೩ ೨
–ವ್ರತಮ್–ಭೂತಮ್–ಪಾನಮ್ । ಚಿತ್ತಮ್–ಧೀತಮ್ ॥ ಸಾಮ ೨೦೬ ॥

॥ ರೌಹಿಣಮ್ । ಇನ್ದ್ರಸ್ತ್ರಿಷ್ಟುಬಿನ್ದ್ರಃ ॥

೧೨೩.೨. ಹಾಉಹಾಉಹಾಉ । ಆಇಹೀ । ೩ । ಆಇಹಿಯಾ । ೩ । ಆಸಾಉ । ೩ । ಆಯಾಮ್ । ೩ । ನಾಮಾಃ । ೩ । ಕಿಟ್ । ೨ । ಇನ್ದ್ರನ್ನರೋ೯ನೇಮಧಿತಾಹವಾ೭೨ನ್ತಾಇ ॥ ಯತ್ಪಾರ್ಯಾ೯ಯುನಜತೇಧಿಯಾ೭೨ಸ್ತಾಃ ॥ ಶೂರೋ೯ನೃಷಾತಾಶ್ರವಸಶ್ಚಕಾ೭೨ಮಾಇ ॥ ಆಗೋ೯ಮತಿವ್ರಜೇಭಜಾತುವಾ೭೨ನ್ನಾಃ । ಮನಾ೭೨೩ಹೋ೯ಇ । ಪ್ರಾಣಾ೭೨೩ಹೋ೯ಇ । ಚಕ್ಷೂ೭೨೩ಹೋ೯ಇ । ಶ್ರೋತ್ರಾ೭೨೩೪ಹೋ೯ಇ । ಘೋಷಾ೭೨೩೪ಹೋ೯ಇ । ವ್ರತಾ೭೨೩೪ಹೋ೯ಇ । ಭೂತಾ೭೨೩೪ಹೋ೯ಇ । ಪಾನಾ೭೨೩೪ಹೋ೯ಇ । ಚಿತ್ತಾ೭೨೩೪ಹೋ೯ಇ । ಧೀತಾ೭೨೩೪ಹೋ೯ಇ । ಸುವಾ೭೨೩ಹೋ೯ಇ । ಜ್ಯೋತಾ೭೨೩ಇಹೋ೯೭೨ । ವಾ೭೨೩ಳಔಹೋವಾ ॥ ಊ೭೨೩ಳಶ ॥ *ದೀ – ೨೬ / ಪ – ೩೬ / ಮಾ – ೩೭ / ಕೇ೯ ॥ ೨೦.೨೦೬ ॥*

ಈ ೨೦೫ ಮತ್ತು ೨೦೬ನೆಯ ಸಾಮಗಾನಗಳು ಇನ್ದ್ರನ್ನರೋ ನೇಮಧಿತಾ ೩೧೮ನೆಯ ಋಕ್ ಮೇಲೆ ಅಧಿಷ್ಠಿತವಾಗಿವೆ.

**ಸ್ತೋಭ ಭಾಷ್ಯ – ಅಸೌ** ಸೂರ್ಯಾದಿಃ ಅಯಮ್ ಅಗ್ನ್ಯಾದಿಃ ನಮಃ ಅನ್ನಾದಿಃ ಕಿಟ್ ಗಮನಂ ಸೂರ್ಯಸ್ಯ ದ್ವಾದಶ ಮಾಸಾತ್ಮಕಂ ಮನಃ ಪ್ರಾಣಃ ಚಕ್ಷುಃ ಶ್ರೋತ್ರಂ ಘೋಷಃ ವ್ರತಂ ಭೂತಂ ಪಾನಂ ಚಿತ್ತಂ ಸ್ಮರಣಂ ಧೀತಂ ಧ್ಯಾನಂ ಸ್ವಜ್ಯೋರ್ತಿರಿನ್ದ್ರೋ ಭಗವಾನ್ ವಾ ॥ ಸಾ ೨೦೬ ॥

ಜೀವನ ಸಂಘರ್ಷದಿಂದ ಪಾರಾಗಲು ಇನ್ದ್ರನ ಶಕ್ತಿಯನ್ನು ಉಪಯೋಗಿಸಿ ಕೊಳ್ಳುವ ಬಗೆಯನ್ನು ತಿಳಿಸಲಾಗುತ್ತಿದೆ. ಇನ್ದ್ರನು ವಾಸನಾರೂಪಿ ಶತ್ರುಗಳ ಸಂಹಾರಕನೂ ಜ್ಞಾನದೀಪ್ತನೂ ಆಗಿದ್ದಾನೆ. ಇಂತಹ ಇನ್ದ್ರನು ನಮ್ಮ ಅಜ್ಞಾನವನ್ನು ಹೋಗಲಾಡಿಸಲಿ. ಗಮನಾರ್ಥಕವಾದ ಕಿಟ್ ಶಬ್ದವು ಗತಿಯುಳ್ಳ ಮನಸ್ಸು ಪ್ರಾಣ ಚಕ್ಷುಸ್ಸು ಶ್ರೋತ್ರ ಘೋಷ ವ್ರತ ಭೂತ ಪಾನ ಚಿತ್ತ ಸ್ಮರಣ ಅಧ್ಯಯನ ಮತ್ತು ಧ್ಯಾನವೆಂಬ ಹನ್ನೆರಡೂ ದ್ವಾದಶಾತ್ಮಕನಾದ ಸ್ವಯಂಜ್ಯೋತಿಯಾದ ಸೂರ್ಯ ಭಗವಂತನೇ ಎಂದೂ ಔಹೋಇಕಾರಸ್ತೋಭವು ವಿಶ್ವೇದೇವತೆಗಳೆಂದೂ ಉಪಾಸನೆ ಮಾಡುತ್ತೇವೆ.

ದಶ ಚತುರ್ಥಃ ಖಣ್ಡಃ ॥ ೪ ॥ ಇತ್ಯರಣ್ಯೇ ಗೇಯಗಾನೇ ಚತುರ್ಥಃ ಪ್ರಪಾಠಕಃ ॥

॥ ಅಗ್ನೇರಿಲಾಂದಮ್ ಪಂಚಾನುಗಾನಮ್ ಇರಾನ್ನಂವಾ ॥ ಅಗ್ನ್ಯನುಷ್ಟುಬಾತ್ಮಾ ॥

೨೦ ೦ ೦ ೧

**೧೨೪.೧ ಹಾಉಹಾಉಹಾಉ । ಊ೨ । ೩ ॥ ಹುಊ೨ । ೩ ॥ ಇಯಾಹಾಉ । ೨ । ಇಯಾ೩ಹಾಉ । ವಾ೩ ॥ ಇಟ್ ಸ್ಥಿ ಇಡಾ೨೩೪೫ ॥**

೧ ೨ ೧ ನ ೨ ೧ ೧೧೧

*ದೀ – ೩ । ಪ – ೧೨ । ಮಾ – ೧೦ । ಶೌ ॥ ೧.೨೦೭ ॥*

## ಋಕ್ – ೬೧೩

॥ ವಿಶ್ವಾಮಿತ್ರೋ ಗಾಥಿನಃ । ತ್ರಿಷ್ಟುಪ್ ಆತ್ಮಾ ಅಗ್ನಿರ್ವಾ ॥

೩ ೧ ೨ ೩ ೧ ೨ ೩ ೧ ೨ ೩ ೨ ೩ ೧ ೨ ೩ ೧ ೨ ೩ ೨

**ಅಗ್ನಿರಸ್ಮಿ ಜನ್ಮನಾ ಜಾತವೇದಾ ಘೃತಂ ಮೇ ಚಕ್ಷುರಮೃತಂ ಮ ಆಸ**

೩ ೧ ೨ ೩ ೧ ೨ರ ೩ ೧ ೨ರ೩ ೧ ೨ ೩
ನ್ । ತ್ರಿಧಾತುರರ್ಕೋ೯ ರಜಸೋ ವಿಮಾನೋಽಜಸ್ರಂ ಜ್ಯೋತಿರ್ಹ
೧ ೨ ೩ ೧ ೨
ವಿರಸ್ಮಿ ಸರ್ವಮ್ ॥ ೧೨-೬೧೩ ॥

೩ ೨ ೩ ೧ ೨ರ ೩ ೧ ೨ ೩ ೨ ೩ ೨ ೩ ೧ ೨ರ
ಅಗ್ನಿಃ-ಅಸ್ಮಿ-ಜನ್ಮನಾ-ಜಾತವೇದಾಃ-ಜಾತ-ವೇದಾಃ । ಘೃತಮ್-ಮೇ-ಚಕ್ಷುಃ
೩ ೧ ೨ ೩ ೧ ೨ರ ೩ ೨ ೩ ೧ ೨ ೩ ೧ ೨ರ ೩ ೨
-ಅಮೃತಮ್-ಅ-ಮೃತಮ್-ಮೇ-ಆಸನ್ ॥ ತ್ರಿಧಾತುಃ-ತ್ರಿ-ಧಾತುಃ-ಅರ್ಕಃ
೧೨ರ ೩ ೧ ೨ ೩ ೧ ೨ರ ೧೨ರ ೩ ೧ ೨ರ ೩
-ರಜಸಃ-ವಿಮಾನಃ-ವಿ-ಮಾನಃ । ಅಜಸ್ರಮ್-ಅ-ಜಸ್ರಮ್-ಜ್ಯೋತಿಃ-ಹ
೨ ೩ ೧೨ರ
ವಿಃ-ಅಸ್ಮಿ-ಸರ್ವಮ್ ॥ ೧೨-೬೧೩ ॥

॥ ಅಗ್ನೇರಿಲಾಂದಂಪಂಚಾನುಗಾನಮ್ ॥ ಅಗ್ನಿಸ್ತ್ರಿಷ್ಟುಬಾತ್ಮಾ ಅಗ್ನಿಃ ವಾ ॥ ತತ್ರ ದ್ವಿತೀಯಮಿದಮ್ ॥

೨ ೧ ೨ ೧ ೨ರ ೦ ೧ ೦ ೨ರ
೧೨೪.೨. ಹಾಉಹಾಉಹಾಉವಾ । ಅಗ್ನಿರಸ್ಮಿಜನ್ಮನಾಜಾತವೇದಾಃ ।
೧ ೦ ೦ ೨ ೧ ೨ರ
ಇಡಾ । ಸುವಃ । ಇಡಾ ॥ ಹಾಉಹಾಉಹಾಉವಾ । ಘೃತಮ್ಮೇ
೧ ೨ ೧ ೨ ೦ ೧ ೦ ೦ ೨
ಚಕ್ಷುರಮೃತಮ್ಮಆಸನ್ । ಇಡಾ । ಸುವಃ । ಇಡಾ ॥ ಹಾಉ
೧೦ ೨ ೧೦ ೨ರ ೧೦ ೨ ೧ ೦
ಹಾಉಹಾಉವಾ । ತ್ರಿಧಾತುರರ್ಕೋ೯ರಜಸೋವಿಮಾನಃ । ಇಡಾ ।
೦ ೨ ೧ ೨ ೧೦ ೨
ಸುವಃ । ಇಡಾ ॥ ಹಾಉಹಾಉಹಾಉವಾ । ಅಜಸ್ರಂಜ್ಯೋತಿರ್ಹ
೧ ೨ ೧ ೨ ೧ ೦ ೦
ವಿರಸ್ಮಿಸರ್ವಮ್ । ಇಡಾ ॥ ಸುವಃ । ಇಡಾ ॥

*ದೀ - ೧೯ । ಪ - ೨೦ । ಮಾ - ೨೧ । ನ ॥ ೨.೨೦೮ ॥*

ಸ್ತೋಭ ಭಾಷ್ಯ - ಹಾಉ । ಊಽ೨ । ಅಗ್ನಿಃ ಇಲಾನ್ದಂ ಸಾಮ ಇರಾನ್ನಂ ವಾ । ಪಂಚಾನುಗಾನಾನಿ ಸ್ತುತಯೋ ಯತ್ರ ಇತಿ ಪಂಚಾನುಗಾನಮ್ । ಆ.ಬ್ರಾ. ೬-೩-೫-೧ ॥ ಪ್ರಥಮೇ ಅನುಗಾನೇ ಸ್ವಾಧ್ಯಾಯೇ ಪಠಿತಾಪಿ ಅಗ್ನಿರಸ್ಮೀತಿ ಋಕ್

ಅನುಪ್ರವಕ್ತ್ರ್ಯಾ । ನಿರರ್ಥಕ್ಯೈಃ । ಸ್ತೋಭೈಃ ಸ್ತುತೇಃ ಅಸಂಭವಾತ್ ಸ್ವಯಮೇವ ಪರಮೇಶ್ವರೋಕ್ತಿಃ । ಅಗ್ನಿರಸ್ಮಿ ಜನ್ಮನಾಽಭಿವ್ಯಕ್ತಿ ಕಾಲೇ ಏವಾಹಂ ಜಾತವೇದಾಃ । ಘೃತಾದಿಹವಿಃ ಮೇ ಚಕ್ಷುಃ ಪ್ರಕಾಶಕಂ ಆಸನ್ ಆಸ್ಯೇ ಮುಖೇ ಅಮೃತಮ್ । ಮಮ ಅಗ್ನಿಮುಖೇನ ದೇವ ತೃಪ್ತೇಃ ಜಗತಃ ಆಪ್ಯಾಯನಾತ್ ಪ್ರಾಣಿನೋ ನ ಮ್ರಿಯನ್ತೇ । ತಥಾ ತ್ರಿಧಾತುಃ ಅಧಿ ದೈವಮಧಿ ಭೂತಂ ಅಧ್ಯಾತ್ಮಂ ಚ ಸ್ಥಿತಃ ಅರ್ಕಃ ದೇವಃ ರಜಸಃ ಲೋಕಸ್ಯ ಅಹಂ ವಿಮಾನಃ ವಿವಿಧ ಪರಿಚ್ಛೇದಃ ವಿಭುಃ ಕ್ವಚಿತ್ ಮನುಷ್ಯಾದಿಷು ಪರಿಮಿತಃ । ಅಜಸ್ರಂ ಸರ್ವಕಾಲಮಾಪ್ಯಾಯಕತ್ವಾತ್ ಸರ್ವ ಮನ್ತರ್ಬಹಿಶ್ಚ ಜ್ಯೋತಿರ್ಹವಿಶ್ಚಾಸ್ಮಿ ॥ ಅರ ೨೦೭, ೨೦೮ ॥

ಸಾಮಗಾನ ಸಂಹಿತೆಯಲ್ಲಿ ಹಾಉ ... ॥ ಊಽ೨ ಎಂಬ ಅರ ೨೦೭ ನೆಯ ಗಾನವು ಕೇವಲ ಅವ್ಯಕ್ತಾರ್ಥ ಸ್ತೋಭಗಳಿಂದ ಉದಯವಾಗಿರುವ ಏಕೈಕ ಸಾಮಗಾನವಾಗಿದೆ. ಋಕ್ ರಹಿತವಾಗಿರುವ ಈ ಗಾನವನ್ನು ಅಧ್ಯಯನ ಪರಂ ಪರೆಯಲ್ಲಿ ಅಧ್ಯಯನ ಮಾಡಲಾಗುತ್ತಿದ್ದರೂ ಈ ಗಾನವು ಅಗ್ನಿರಸ್ಮೀತಿ ಎಂಬ ೬೧೩ನೆಯ ಋಕ್ಕನ್ನುಸರಿಸುತ್ತದೆ. ಈ ಸ್ತುತಿಗಳು ಐದು ಗಾನಗಳಿಂದಾಗಿರುವುದರಿಂದ ಪಂಚಾನುಗಾನವೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಪರಮೇಶ್ವರನೇ ಸ್ವಯಂ ಹೀಗೆ ಹೇಳುತ್ತಿದ್ದಾನೆ.

ಅಗ್ನಿಯಾಗಿ ಹುಟ್ಟಿದಂದಿನಿಂದಲೇ ಸಮಸ್ತಜ್ಞಾನಗಳ ಆಗರವಾಗಿರುವುದರಿಂದ ಜಾತವೇದನೆನಿಸಿದ್ದೇನೆ. ಘೃತಾದಿ ಹವ್ಯದ್ರವ್ಯಗಳಿಂದಲೇ ನನ್ನ ಕಣ್ಣುಗಳು ಪ್ರಕಾಶಿಸುತ್ತಿದ್ದು ಬಾಯಿಯಲ್ಲಿ ಅಮೃತವಿರುವುದಾಗಿ ಅಗ್ನಿಮುಖವಾಗಿಯೇ ಹವಿಸ್ಸನ್ನು ಪಡೆಯುವ ದೇವತೆಗಳೆಲ್ಲಾ ತೃಪ್ತರಾಗಿ ಜಗತ್ತಿಗೆ ಆಪ್ಯಾಯಮಾನರಾಗಿ ಜೀವಿಗಳು ಜೀವಿಸುವಂತಾಗಿ ಅಧಿದೈವ ಅಧಿಭೂತ ಅಧ್ಯಾತ್ಮ ಸ್ಥಿತಿಗಳಲ್ಲಿದ್ದಾರೆ. ಸೂರ್ಯನ ರೂಪದಲ್ಲಿ ವಿಭುವಾಗಿ ಲೋಕದಲ್ಲಿ ಮನುಷ್ಯಾದಿ ಸಮಸ್ತವೂ ಕಾಲತ್ರಯದ ಪರಿಮಿತಿಯಲ್ಲಿ ವಿಭಜಿಸಲ್ಪಟ್ಟಿದೆ. ಸದಾ ಸರ್ವದಾ ಎಲ್ಲರಿಗೂ ಹಿತವನ್ನುಂಟು ಮಾಡುತ್ತಾ ಒಳಗೂ ಹೊರಗೂ ಜ್ಯೋತಿಸ್ವರೂಪದ ಹವಿಸ್ಸಾಗಿದ್ದೇನೆ.

ಸಾಯಣ ಭಾಷ್ಯ – ಸಾಕ್ಷಾತ್ ಕೃತಪರತತ್ತ್ವಸ್ವರೋಪೇಗ್ನಿಃ ಸ್ವಾತ್ಮನಃ ಸರ್ವಾತ್ಮನಃ ಸರ್ವಾತ್ಮಕತ್ವಾನುಭವಮ್ ಅಸ್ಯಾಮ್ ಋಚಿ ಆವಿಷ್ಕರೋತಿ । ದ್ವಯೋಃ ಉತ್ತರಾಗ್ನೇಃ ಸ್ತುತಿಃ ಪೂರ್ವಾಸ್ತುತಿಃ ಸರ್ವಾತ್ಮನಾತ್ಮನಃ । ಹೇ ಕುಶಿಕಾಃ ಭೋಕ್ತೃ ಭೋಗ್ಯಭಾವೇನ ದ್ವಿವಿಧಮ್ ಇದಂ ಸರ್ವಂ ಜಗತ್ । ಏತಾವದ್ವಾ ಇದಮನ್ನಂ ಚೈವಾನ್ನಾದಶ್ಚ ಸೋಮಃ ಏವಾನ್ನ ಮಗ್ನಿರನ್ನಾದಃ । ಇತಿ ಶ್ರುತೇಃ ತತ್ರ ಸಕಲಭೋಕ್ತೃವರ್ಗರೂಪೇಣ ಅನ್ನಾದೋಽಗ್ನಿಃ । ಸ ಚ ಅಗ್ನಿವಾಯ್ವಾದಿತ್ಯ ಭೇದೇನ ತ್ರೇಧಾ ಭೂತ್ವಾ ಪೃಥಿವ್ಯನ್ತರಿಕ್ಷ ದ್ಯುಲೋಕಾನಧಿತಿಷ್ಠತಿ । ತದುಕ್ತಂ ವಾಜಸನೇಯಕೇ । ಸ ತ್ರೇಧಾತ್ಮಾನಂ ವ್ಯಕುರುತ । ಆದಿತ್ಯಂ ದ್ವಿತೀಯಂ ವಾಯುಂ ತೃತೀಯಮ್ ಇತಿ ॥ ಬೃ.ಆ ೧–೨–೩ ॥

ತತ್ರ ಸಃ **ಅಗ್ನಿಃ** ಅಹಂ **ಜನ್ಮನಾ** ಏವ **ಜಾತವೇದಾಃ** **ಅಸ್ಮಿ** । ಶ್ರವಣ ಮನನಾದಿ ಸಾಧನ – ನೈರಪೇಕ್ಷ್ಯೇಣ ಸ್ವಭಾವತ ಏವ ಸಾಕ್ಷಾತ್ಕೃತಪರತತ್ವ ಸ್ವರೂಪೋಽಸ್ಮಿ । **ಘೃತಂ ಮೇ ಚಕ್ಷುಃ** ಯದೇತದ್ವಿಶ್ವಸ್ಯಾವಭಾಸಕಂ ಮಮ ಸ್ವಭಾವ ಭೂತಂ ಪ್ರಕಾಶಾತ್ಮಕಂ ಚಕ್ಷುಃ ತದ್ಘೃತಮ್ । ಇದಾನೀಮತ್ಯನ್ತಂ ದೀಪ್ತಮ್ । ಯದೇತತ್ **ಅಮೃತಂ** ಕರ್ಮಫಲಂ ದಿವ್ಯಾದಿ ವಿವಿಧ ವಿಷಯೋಪಭೋಗಾತ್ಮಕಂ ತತ್ **ಮೇ** ಮಮ **ಆಸನ್** ಆಸ್ಯೇ ವರ್ತತೇ । ಸಕಲ ಭೋಕ್ತೃವರ್ಗಾತ್ಮನಾ ಸ್ವಯ ಮೇವಾವಸ್ಥಾನಾತ್ । ಏವಂ ಸ್ವಾತ್ಮನಃ ಪೃಥಿವ್ಯಧಿಷ್ಠಾತೃರೂಪತಾಮಭಿಧಾಯ ವಾಯ್ವಾತ್ಮನಾನ್ತರಿಕ್ಷಾಧಿಷ್ಠಾತೃತಾಮಾಹ – ಅರ್ಕೋ ಜಗತಃ ಸ್ರಷ್ಟಾ ಪ್ರಾಣಃ । ಸೋಽರ್ಚನ್ನಚರತ್ತಸ್ಯಾರ್ಚತ ಆಪೋಽಜಾಯನ್ತಾರ್ಚತೇವಮೇತಿಕಮಭೂದಿತಿ ತದೇವಾ ರ್ಕಸ್ಯಾರ್ಕತ್ವಮ್ – ಇತಿ ಶ್ರುತೇಃ । ಶ.ಬ್ರಾ ೧೦–೬–೫ । ಸಪ್ರಾಣಃ ಅಹಂ **ತ್ರಿಧಾತುಃ** ತ್ರಿಧಾ ಆತ್ಮಾನಂ ವಿಭಜ್ಯ ತತ್ರ ವಾಯ್ವಾತ್ಮನಾ ರಜಸಃ ಅನ್ತರಿಕ್ಷಸ್ಯ **ವಿಮಾನಃ** ವಿಮಾತಾ ಅಧಿಷ್ಠಾತಾ ಅಸ್ಮಿ । ತಥಾ ಆದಿತ್ಯರೂಪೇಣ ದ್ಯುಲೋಕಾಧಿಷ್ಠಾತೃತಾಮಾಹ । **ಅಜಸ್ರಂ ಜ್ಯೋತಿಃ** । ಅನುಪಕ್ಷೀಣಂ ನಿತ್ಯಂ ತೇಜಃ ಪ್ರಕಾಶಾತ್ಮಾ ದ್ಯುಲೋಕಾಧಿ ಷ್ಠಾತೃತಾ ಆದಿತ್ಯೋಽಹಮಸ್ಮಿ । ಏವಂ ಭೋಕ್ತೃರೂಪತಾಮಾತ್ಮನೋಽನುಸಂಧಾಯ ಭೋಗ್ಯ ರೂಪತಾಮಪ್ಯನುಸನ್ಧತ್ತೇ । ಯತ್ **ಹವಿಃ** ಭೋಗ್ಯಂ ಪ್ರಸಿದ್ಧಮಸ್ತಿ ತತ್ **ಸರ್ವಮ್** ಅಪ್ಯಹಮೇವಾಸ್ಮಿ ।

ಯದ್ವಾ । **ಅಹಮಗ್ನಿರಸ್ಮಿ** ದೇವಾನಾಮ್ ಹವಿಃ ಪ್ರಾಪಣಾದಜ್ಞನಾದಿಗುಣ ಯುಕ್ತೋಽಸ್ಮಿ । ಕಿಂ ಚ **ಜನ್ಮನಾ** ಉತ್ಪತ್ಯಾ **ಜಾತವೇದಾಃ** ಜಾತ ಜ್ಞಾನೋಽಸ್ಮಿ । ಉತ್ಪತ್ತಿಕ್ಷಣಮೇವ ಸರ್ವಜ್ಞೋಽಹಮಸ್ಮಿ । ಅಥವಾ ಜಾತಂ ಸರ್ವಂ ಸ್ವಾತ್ಮತಯಾ ವೇತ್ತೀತಿ ಜಾತವೇದಾಃ । ಸರ್ವಾತ್ಮಕಃ ಇತ್ಯರ್ಥಃ । ತತ್ಕಥಮ್ ಇತ್ಯುಚ್ಯತೇ । **ಘೃತಂ ಮೇ ಚಕ್ಷುಃ** ಯದೇತದ್ ಘೃತಂ ಪ್ರಸಿದ್ಧಮಸ್ತಿ ತನ್ಮೇ ಚಕ್ಷುಃಸ್ಥಾನೀಯಮ್ । ಯಥಾ ಲೋಕೇ ಚಕ್ಷುರ್ಭಾಸಕಮ್ ಏವಂ ಘೃತಂ ಮಯಿ ಪ್ರಕ್ಷಿಪ್ತಂ ಜ್ವಾಲಾ ಮುತ್ಪಾದಯನ್ಮಮ ಭಾಸಕಮ್ । **ಅಮೃತಮ್** – ಪ್ರಭಾರೂಪಂ ಯದಮೃತಮ ವಿನಾಶಿ ಜ್ಯೋತಿಃ **ಮೇ** ಮಮ **ಆಸನ್** ಆಸ್ಯೇ ವರ್ತತೇ । **ತ್ರಿಧಾತುಃ** ಪ್ರಾಣಾಪಾನವ್ಯಾನಾತ್ಮಕಸ್ತ್ರಿಧಾ ವರ್ತಮಾನಃ **ಅರ್ಕಃ** ಅರ್ಚನೀಯಃ । ಯಃ ಪ್ರಾಣೋಽಸ್ತಿ ಸೋಽಪ್ಯಹಮೇವಾಸ್ಮಿ । ತಥಾ ರಜಸೋಽನ್ತರಿಕ್ಷಸ್ಯ **ವಿಮಾನಃ** ವಿಶೇಷೇಣ ಮಾತಾ ಪರಿಚ್ಛೇತ್ತಾ ವಾಯುಶ್ಚಾಹಮಸ್ಮಿ । ಕಿಂ ಚ **ಅಜಸ್ರಂ ಜ್ಯೋತಿಃ** ನೈರನ್ತರ್ಯೇಣ ತಾಪಕಃ ಸೂರ್ಯಶ್ಚಾಹಮಸ್ಮಿ । ಕಿಂ ಬಹುನಾ । ಆಜ್ಯ ಪುರೋಡಾಶಾದಿರೂಪಂ ಯದೇತ ದ್ಧವಿರಸ್ತಿ ತದುಪಲಕ್ಷಿತಂ ತತ್ಸರ್ವಮಪ್ಯಹಮಸ್ಮಿ। ಸರ್ವಂ ಖಲ್ವಿದಂ ಬ್ರಹ್ಮ ಇತಿ ಶ್ರುತೇಃ । ಛಾಂ.ಉ. ೩–೧೪–೧ ॥ ತಮನೇಕಧಾಗ್ನೇಃ ಸರ್ವಾತ್ಮಕತ್ವ ಪ್ರತಿಪಾದನೇನ ಪರ ಬ್ರಹ್ಮತ್ವ ಮುಕ್ತಂ ಭವತಿ ॥ ಅಜಸ್ರಮ್–ಧರ್ಮಃ–ಇತಿ ಸಾಮ್ನ ಋಚಃ ಪಾಠಭೇದಃ ॥

**ಜನ್ಮನಾ** ಜನ್ಮದಿಂದಲೇ **ಅಗ್ನಿಃ** ಅಗ್ರಣಿ ಮುಖಂಡನಾಗಿರುವ ಅಗ್ನಿಯಾಗಿ ರುವ ನಾನು **ಜಾತವೇದಾಃ** ಸರ್ವಜ್ಞನು **ಅಸ್ಮಿ** ಆಗಿರುವೆನು. **ಘೃತಂ** ತುಪ್ಪವು ತೇಜಸ್ಸು – ತೇಜೋ ವೈ ಘೃತಂ ಮೈ ೧–೬–೮ । **ಮೇ** ನನ್ನ **ಚಕ್ಷುಃ** ಪ್ರಕಾಶಾತ್ಮಕವಾದ ಕಣ್ಣುಗಳು **ಅಮೃತಮ್** ಅಮೃತವು **ಮೇ** ನನ್ನ **ಆಸನ್** ಮುಖ ಬಾಯಿ ಆಗಿದೆ. **ತ್ರಿಧಾತುಃ**

ಪ್ರಾಣ ಅಪಾನ ವ್ಯಾನ ಎಂದು ಮೂರು ಭಾಗವಾಗಿರುವ **ಅರ್ಕಃ** ಪೂಜನೀಯವಾದ ಆದಿತ್ಯನೂ ಪ್ರಾಣಗಳೂ ಪೃಥ್ವೀ ಅಂತರಿಕ್ಷ ದ್ಯುಲೋಕಗಳೆಂಬ ತ್ರಿಲೋಕಗಳನ್ನು ಧರಿಸಿರುವ-ಸ ಪ್ರಜಾಪತಿಃ ಇಮಾನ್ ತ್ರೀನ್ ಲೋಕಾನ್ ಸ್ತ್ರೇಧಾಽದುಹತ್ ತತ್ ತ್ರಿಧಾತೋಸ್ತ್ರಿಧಾತುತ್ವಮ್ । ನಾನೇ ಆಗಿರುತ್ತೇನೆ । ತೈ.ಸಂ ೨-೩-೭-೧ । **ರಜಸಃ** ಅಂತರಿಕ್ಷದ **ವಿಮಾನಃ** ಅಧಿಷ್ಠಾತೃವು ನಾನೇ. ಅಳತೆ ಮಾಡುವ ವಾಯುವೂ ನಾನೇ **ಅಜಸ್ರಂ ಜ್ಯೋತಿಃ** ಕ್ಷೀಣವಾಗದ ನಿರಂತರವಾದ ಜ್ಯೋತಿಯೂ ನಾನೇ **ಹವಿಃ** ಹವಿಸ್ಸು ಮೊದಲಾಗಿ **ಸರ್ವಮ್** ಎಲ್ಲವೂ **ಅಸ್ಮಿ** ನಾನೇ ಆಗಿರುವೆನು.

ಕುಶಿಕಗೋತ್ರದ ಋಷಿಗಳು ಸರ್ವಾತ್ಮ ಭಾವದಿಂದ ಮೊದಲು ಉತ್ತರಾಗ್ನಿಯ ಸ್ತುತಿಯನ್ನು ಮಾಡಿದಾಗ ಅಗ್ನಿಯೇ ತನ್ನ ಪರತತ್ವಭಾವವನ್ನು ತಿಳಿಸುತ್ತಿದ್ದಾನೆ. ಕುಶಿಕರೇ ಭೋಕ್ತೃ ಮತ್ತು ಭೋಗ್ಯ ಭಾವದಿಂದ ಎಲ್ಲಾ ಜಗತ್ತೂ ಎರಡು ವಿಧವಾಗಿದೆ. ಭೋಗ್ಯವಾದುದು ಅನ್ನ. ಭೋಗಿಸುವವನೇ ಅನ್ನಾದ. ಸೋಮನು ಅನ್ನ ಅಗ್ನಿಯು ಅನ್ನಾದ. ಅನ್ನ ಮತ್ತು ಅನ್ನಾದ ಎಂಬುದಾಗಿ ಶ್ರುತಿಯು ಹೇಳುತ್ತದೆ. ಅಲ್ಲಿ ಸಕಲಭೋಕ್ತೃವರ್ಗರೂಪದಿಂದ ಅಗ್ನಿಯೇ ಅನ್ನಾದ-ಭೋಗಿಸುವವನು. ಈ ಅಗ್ನಿಯು ಅಗ್ನಿ ವಾಯು ಆದಿತ್ಯ ಎಂಬ ಭೇದದಿಂದ ಮೂರು ಭಾಗವಾಗಿ ಪೃಥಿವೀ ಅಂತರಿಕ್ಷ ದ್ಯುಲೋಕದಲ್ಲಿ ಅಧಿಷ್ಠಿತವಾಗಿರುತ್ತದೆ. ಇದನ್ನೇ ವಾಜಸನೇಯ ಸಂಹಿತೆಯಲ್ಲಿ ಹೀಗೆ ಹೇಳಿದೆ - ಅಗ್ನಿಯು ತನ್ನನ್ನು ಮೂರು ಭಾಗವಾಗಿ ವಿಂಗಡಿಸಿಕೊಂಡು, ಮೊದಲನೆಯದಾಗಿ ಪೃಥ್ವಿಯಲ್ಲಿ ಅಗ್ನಿಯೂ ಎರಡನೆಯದಾಗಿ ದ್ಯುಲೋಕದಲ್ಲಿ ಆದಿತ್ಯನೂ ಮೂರನೆಯದಾಗಿ ಅಂತರಿಕ್ಷದಲ್ಲಿ ವಾಯುವೂ ಆದನು. ಆ ಅಗ್ನಿಯು - ನಾನು ಜನ್ಮದಿಂದಲೇ ಜಾತವೇದನಾಗಿರುವೆನು ಎಂದರೆ ಸರ್ವಜ್ಞನಾಗಿರುವೆನು. ಶ್ರವಣ ಮನನ ನಿಧಿಧ್ಯಾಸನಗಳಿಲ್ಲದೆ ಸ್ವಾಭಾವಿಕವಾಗಿಯೇ ಪರಮಾತ್ಮ ತತ್ವಸ್ವರೂಪವನ್ನು ಸಾಕ್ಷಾತ್ಕರಿಸಿಕೊಂಡಿರುವೆನು. ಘೃತವು ನನ್ನ ಕಣ್ಣುಗಳು - ಅಂದರೆ ಈ ಪ್ರಪಂಚವನ್ನು ಬೆಳಗಿಸುವ ನನ್ನ ಸ್ವಭಾವವಾದ ಪ್ರಕಾಶ ಅಥವಾ ಬೆಳಕು ನನ್ನ ಕಣ್ಣುಗಳು ಆ ಘೃತವು ಈಗ ಅತ್ಯಂತ ದೀಪ್ತವಾಗಿ ಅಮೃತ ಸ್ವರೂಪವಾಗಿದೆ - ಅಂದರೆ ಗವ್ಯವೇ ಮೊದಲಾದ ವಿವಿಧ ವಿಷಯೋಪ ಭೋಗಾತ್ಮಕವಾದ ಕರ್ಮ ಫಲವೆಲ್ಲವೂ ನನ್ನ ಮುಖದಲ್ಲಿಯೇ ಇರುತ್ತದೆ. ಇದಕ್ಕೆ ಕಾರಣ ಜಗತ್ತಿನಪ್ರಾಣನಾದ ನಾನು ಅಗ್ನಿಯಾಗಿ ಪೃಥಿವಿಯನ್ನೂ ಆದಿತ್ಯನಾಗಿ ದ್ಯುಲೋಕವನ್ನೂ ವಾಯುವಾಗಿ ಅಂತರಿಕ್ಷವನ್ನೂ ಆಶ್ರಯಿಸಿದ್ದೇನೆ. ಜಗತ್ತನ್ನು ರಚಿಸುವ ಪ್ರಾಣನೂ ನಾನೇ ಆಗಿದ್ದೇನೆ. ಹೀಗೆ ಜಗತ್ತನ್ನು ರಚಿಸಿ ಅಲ್ಲಿಯೇ ಒಂದಾಗಿದ್ದೇನೆಂಬುದನ್ನು ಅನುಸಂಧಾನ ಮಾಡುತ್ತಾ ಸರ್ವಾತ್ಮ ಭಾವವನ್ನು ಪಡೆಯಬೇಕು.

ಈ ಬಗೆಯಾಗಿಯೂ ಅರ್ಥಾನುಸಂಧಾನಮಾಡಬಹುದು.

**ಅಗ್ನಿಃ** ದೇವತೆಗಳಿಗೆ ಹವಿಸ್ಸನ್ನು ತಲುಪಿಸುವವನು **ಅಸ್ಮಿ** ನಾನೇ ಅಗಿರುವೆನು **ಜನ್ಮನಾ** ಹುಟ್ಟಿನಿಂದಲೇ **ಜಾತವೇದಾಃ** ಸರ್ವಜ್ಞನಾಗಿರುವೆನು ಅಥವಾ ಉತ್ಪನ್ನವಾದ ಎಲ್ಲ

ವಸ್ತುಗಳನ್ನೂ ಆತ್ಮಸ್ವರೂಪದಿಂದ ತಿಳಿದುಕೊಳ್ಳುವ ಸರ್ವಾತ್ಮನು **ಘೃತಂ ಮೇ ಚಕ್ಷುಃ** ಘೃತವು ನನ್ನ ಕಣ್ಣುಗಳು **ಅಮೃತಂ** ಅಮೃತವು **ಮೇ** ನನ್ನ **ಆಸನ್** ಮುಖದಲ್ಲಿದೆ. **ತ್ರಿಧಾತುಃ** ಪ್ರಾಣಾಪಾನವ್ಯಾನಗಳೆಂಬ ಮೂರು ಪ್ರಕಾರದ ಪ್ರಾಣವೂ ನಾನೇ ಆಗಿರುವೆನು. **ರಜಸಃ** ಅಂತರಿಕ್ಷದಲ್ಲಿ **ವಿಮಾನಃ** ವಿಶೇಷವಾಗಿ ಅಳೆಯುವ ವಾಯುವೂ ನಾನೇ ಆಗಿರುವೆನು. **ಅಜಸ್ರಂಜ್ಯೋತಿಃ** ನಿರಂತರ ತಪಿಸುತ್ತಿರುವ ಸೂರ್ಯನೂ ನಾನೇ ಆಗಿರುವೆನು. **ಹವಿರಸ್ಮಿಸರ್ವಮ್** ಘೃತ ಪುರೋಡಾಶಾದಿ ಸಕಲ ಹವಿಸ್ಸುಗಳಲ್ಲೂ ನಾನೇ ಇರುವೆನು. ಅರ್ಥಾತ್ ಸರ್ವವ್ಯಾಪಕನಾದ ಪರಬ್ರಹ್ಮನು ನಾನೇ.

ದೇವತೆಗಳಿಗೆ ಹವಿಸ್ಸನ್ನುತಲುಪಿಸುವ ಉಜ್ವಲವಾಗಿಉರಿಯುವುದೇ ಮೊದಲಾದಗುಣಗಳುಳ್ಳವನಾದ ಅಗ್ನಿಯುನಾನಾಗಿದ್ದೇನೆ. ಹುಟ್ಟಿನಿಂದಲೇ ಸರ್ವಜ್ಞನಾಗಿರುವೆನು ಎಂದರೆ – ಉತ್ಪತ್ತಿ ಆದಕ್ಷಣದಿಂದಲೂ ಸಕಲ ತಿಳುವಳಿಕೆಗಳನ್ನೂ ಪಡೆದಿರುವೆನು ಅಥವಾ ಹುಟ್ಟಿದ ಎಲ್ಲ ವಸ್ತುಗಳನ್ನೂ ತಿಳಿದುಕೊಂಡಿರುವೆನು – ನಾನು ಸರ್ವಾತ್ಮಕನಾಗಿರುವೆನು. ಇದು ಹೇಗೆಂದರೆ ಈ ಘೃತವು ನನ್ನ ಕಣ್ಣು – ಈ ಘೃತವು ನನ್ನ ಕಣ್ಣಿನ ಸ್ಥಾನದಲ್ಲಿದೆ – ಕಣ್ಣಿಗೆ ಬೆಳಕನ್ನುಕೊಡುವ ಹಸುವಿನ ಘೃತವು ಜ್ವಾಲೆಯನ್ನು ಉತ್ಪಾದಿಸಿ ನನ್ನನ್ನು ತೋರಿಸಿಕೊಡುವುದು. ಪ್ರಭಾರೂಪವಾದ ನಾಶವಿಲ್ಲದ ಅಮೃತವು ನನ್ನ ಬಾಯಿಯಲ್ಲಿ ಇದೆ. ಪ್ರಾಣಾಪಾನ ವ್ಯಾನಗಳೆಂಬ ಮೂರುವಿಧವಾಗಿ ಇರುವ ಪೂಜನೀಯವಾದ ಪ್ರಾಣಗಳೇ ನಾನು. ಅಂತರಿಕ್ಷವನ್ನು ವಿಶೇಷವಾಗಿ ಅಳೆಯುವ ವಾಯುವೂ ನಾನೇ. ನಿರಂತರವಾಗಿ ತಪಿಸುತ್ತಿರುವ ಬೆಳಗುತ್ತಿರುವ ಸೂರ್ಯನೂ ನಾನೇ ಆಗಿರುವೆನು. ಹೆಚ್ಚೇನು ಆಜ್ಯ ಪುರೋಡಾಶಾದಿಯಾಗಿರುವ ಈ ಎಲ್ಲ ಹವಿಸ್ಸುಗಳಿಗೆ ಲಕ್ಷ್ಯವಾಗಿರುವವನೂ ನಾನೇ ಆಗಿರುವೆನು. ಎಂದರೆ ಶ್ರುತಿಯ ವಾಕ್ಯದಂತೆ ಸರ್ವಂ ಖಲ್ವಿದಂ ಬ್ರಹ್ಮನು ನಾನೇ ಆಗಿರುವೆನು. ಈ ರೀತಿಯಾಗಿ ಅನೇಕ ರೂಪಗಳಿಂದ ಇರುವ ಅಗ್ನಿಯು ಸರ್ವಾತ್ಮಕನಾಗಿ ಪರಮಾತ್ಮನೇ ಆಗಿರುತ್ತಾನೆ.

*ಕೇವಲಾತ್ಮನನಲಸ್ವರೂಪನಾಂ*
*ತೇಜಮಲ್ತೆ ಸಕಲಜ್ಞನಾದಗಂ ।*
*ಮನ್ಮುಖಂ ಋತಸರಸ್ವತೀಶಿಖಂ*
*ಪ್ರಾಣನಾಂ ಮಿಹಿರನಾಂ ಸಮೀರನಾಂ ॥*

## ಋಕ್ – ೬೧೪

॥ ವಿಶ್ವಾಮಿತ್ರೋ ಗಾಥಿನಃ ತ್ರಿಷ್ಟುಬಗ್ನಿಃ ॥

೨ ೩ ೨ ೩ ೧ ೨ೡ ೩ ೧ ೨ೡ ೩ ೧ ೨ೡ೩ ೧

**ಪಾತ್ಯಗ್ನಿರ್ವಿಪೋ ಅಗ್ರಂ ಪದಂ ವೇಃ ಪಾತಿ ಽಯಹ್ವಶ್ಚರಣ೧\ಸೂ**

೨ ೨ ೩ ೧ ೨ ೩ ೧ ೨ ೩ ೧ ೨೧ ೩ ೧ ೨
ರ್ಯಸ್ಯ । ಪಾತಿ ನಾಭಾ ಸಪ್ತಶೀರ್ಷಾಣಮಗ್ನಿಽಪಾತಿ ದೇವಾನಾ
೩ ೧ ೨ ೩ ೨
ಮುಪಮಾದಮೃಷ್ವಃ ॥ ೧೩-೬೧೪ ॥

ಸ್ವ-೩೦ । ಉ ೩ । ಧಾ ೧೦೧ । ವ । ದ-೩ ॥

೧ ೨೧ ೩ ೨ ೩ ೨ ೧೨೧ ೩ ೨ ೧ ೨೧ ೩ ೨ ೧೨೧
ಪಾತಿ-ಅಗ್ನಿಃ-ವಿಪಃ-ಅಗ್ರಮ್-ಪದಮ್-ವೇಃ । ಪಾತಿ-ಯಹ್ವಃ-ಚರಣಮ್
೧ ೨೧ ೧ ೨೧ ೧ ೨೧ ೩ ೧ ೨ ೩ ೨ ೩
-ಸೂರ್ಯಸ್ಯ ॥ ಪಾತಿ-ನಾಭಾ-ಸಪ್ತಶೀರ್ಷಾಣಮ್-ಸಪ್ತ-ಶೀರ್ಷಾಣಮ್-ಅ
೨ ೧ ೨೧ ೩ ೧ ೨ ೩ ೧ ೨ ೩ ೧ ೨೧ ೩ ೨
ಗ್ನಿಃ । ಪಾತಿ-ದೇವಾನಾಮ್-ಉಪಮಾದಮ್-ಉಪ-ಮಾದಮ್-ಋಷ್ವಃ ॥

ಆ - ೮೬ । ಅ - ೨೮ । ಪ - ೨೮೮ । ಗೈ । ದ - ೩ ॥

॥ ತೃತೀಯಾದಶತಿಃ ॥ ೩ ॥ ತೃತೀಯಃ ಖಣ್ಡಃ ॥ ೩ ॥

॥ ಅಗ್ನೇರಿಲಾಂದಂಪಂಚಾನುಗಾನಮ್ । ಅಗ್ನಿಸ್ತ್ರಿಷ್ಟುಬಗ್ನಿಃ । ತತ್ರ ತೃತೀಯಮಿದಮ್ ॥

೨೧ ೦ ೦ ೦ ೦ ೧
೧೨೫.೧. ಹಾಉಹಾಉಹಾಉ । ಪಾತ್ಯಗ್ನಿರ್ವಿಪೋಽಅಗ್ರಂಪದಂ
೨೧ ೫ ೨
ವೇಃ । ಹಾಽ೩೧ಉವಾಽ೨೩ । ಸೂಽ೨೩೪ವಾಃ । ಇಹ । ಹಾಽ೩
೫ ೨೧ ೦ ೦ ೦
೧ಉವಾಽ೨೩ । ಜ್ಯೋಽ೨೩೪ತೀಃ ॥ ಹಾಉಹಾಉಹಾಉ । ಪಾ
೦ ೧ ೨೧
ತಿಯಹ್ವಶ್ಚರಣಂ೮ಸೂರಿಯಾಸ್ಯಾ । ಹಾಽ೩೧ಉವಾಽ೨೩ । ಸೂಽ೨
೫ ೨ ೫
೩೪ವಾಃ । ಇಹ । ಹಾಽ೩೧ಉವಾಽ೨೩ । ಜ್ಯೋಽ೨೩೪ತೀಃ ॥
೨೧ ೦ ೦ ೦ ೦ ೦ ೦ ೦ ೧ ೨
ಹಾಉಹಾಉಹಾಉ । ಪಾತಿನಾಭಾಸಪ್ತಶೀರ್ಷಾಣಮಾಗ್ನಿಃ । ಹಾಽ
೫ ೨
೩೧ಉವಾ೨೩ । ಸೂಽ೨೩೪ವಾಃ । ಇಹ । ಹಾಽ೩೧ಉವಾಽ೨
೫ ೨೧ ೦ ೦ ೦ ೦ ೦ ೦
೩ । ಜ್ಯೋಽ೨೩೪ತೀಃ ॥ ಹಾಉಹಾಉಹಾಉ । ಪಾತಿದೇವಾನಾ

ಮುಪಮಾದಮಾರ್ಷ್ವ: । ಹಾ೨ಇ೧ಉವಾ೨೩ಇ । ಸೂ೨೩ಇಳಿ

ವಾ: । ಇಹ । ಹಾ೨ಇ೧ಉವಾ೨೩ಇ । ಜ್ಯೋ೨೩ಇಳಿತೀ: ॥

*ದೀ - ೨೮ । ಪ - ೨೮ । ಮಾ - ೩೨ । ಡಾ ॥ ೩.೨೦೯ ॥*

ಸ್ತೋಭ ಭಾಷ್ಯ - ಭಗವಾನಗ್ನಿ: ವಿವಿಧ ಪ್ರಾಣಿ ಪಾಲನಾತ್ **ವಿಪ್ರ:** । ಅಗ್ರಂ ಪದಂ ಪ್ರಧಾನಂ ಸ್ಥಾನಂ ಆತ್ಮತತ್ತ್ವಂ **ವೇ:** ವೇತ್ತು: ಸಮ್ಯಗಾಹಾರ ಪರಿಣಾಮೇನ ಚಿತ್ತನೈರ್ಮಲ್ಯಮುತ್ಪಾದಯನ್ **ಪಾತಿ** ಪಾಲಯತಿ । ತಥಾ **ಯಹ್ವ:** ಮಹಾನ್ ಏಷ **ಸೂರ್ಯಸ್ಯ ಚರಣಂ** ಉದಯಾಸ್ತಮಯಲಕ್ಷಣಂ **ಪಾತಿ** । ತಥಾ **ನಾಭಾ** ಪೃಥಿವ್ಯಾಂ ಉತ್ಪತ್ತಿ ಸ್ಥಾನೇ **ಸಪ್ತಶೀರ್ಷಾಣಾಮ್** ಸಪ್ತಛನ್ದೋಯೋಗಾತ್ ಬುದ್ಧಿ: ಮನ: ಶ್ರೋತ್ರಂ ತ್ವಕ್ ಚಕ್ಷು: ಜಿಹ್ವಾ ನಾಸಿಕಯೋಗಾಚ್ಚ ಸಪ್ತಶಿರಸಂ ಯಜ್ಞಂ **ಪಾತಿ** । ತಥಾ **ಋಷ್ವ: ದೇವಾನಾ ಮುಪಮಾದಂ** ತೃಪ್ತಿಂ **ಪಾತಿ** ॥ ಸಾಮ ೨೦೯ ॥

ಅಗ್ನಿಯು ವಿವಿಧಪ್ರಾಣಿಗಳನ್ನು ಪೋಷಿಸಿಪಾಲಿಸುತ್ತಿರುವುದರಿಂದ ವಿಪ್ರ ನೆನಿಸಿದ್ದಾನೆ. ಜೀವನದ ಅಂತಿಮಗುರಿಯಾದ ಆತ್ಮತತ್ತ್ವವನ್ನರಿತವನಾಗಿರುವುದರಿಂದ ಪ್ರಪಂಚದ ನೇತಾರನಾಗಿ ಪ್ರಧಾನಸ್ಥಾನವನ್ನಲಂಕರಿಸಿದ್ದಾನೆ. ಆಹಾರದ ಉತ್ಕೃಷ್ಟ ಭಾಗದಿಂದ ಚಿತ್ತವುನಿರ್ಮಲವಾಗುವಂತೆ ಮಾಡುವುದರಿಂದ ಪಾಲಕನೆನಿಸಿದ್ದಾನೆ. ಸೂರ್ಯನ ಚರಣಗತಿಯನ್ನು ಉದಯಾಸ್ತದ ಲಕ್ಷಣದಿಂದಲೂ ಚರಾಚರಜಗತ್ತಿನ ಉತ್ಪತ್ತಿ ಸ್ಥಾನವಾಗಿ ಪೃಥ್ವಿಯನ್ನು ಗುರುತಿಸುವಂತೆ ಮಾಡಿರುವುದರಿಂದ ನಿಯಂತೃವೆನಿಸಿದ್ದಾನೆ. ಗಾಯತ್ರ್ಯಾದಿ ಸಪ್ತಛಂದಸ್ಸುಗಳ ಯೋಗದಿಂದಲೂ ಬುದ್ಧಿ ಮನಸ್ಸು ಕಿವಿ ಚರ್ಮ ಕಣ್ಣ ನಾಲಿಗೆ ಮೂಗು ಎಂಬ ಸಪ್ತಶೀರ್ಷಸ್ಥ ಜ್ಞಾನೇಂದ್ರಿಯಗಳಿಂದಲೂ ಸಪ್ತ ಹವಿಸ್ಸಂಸ್ಥೆಗಳಿಂದಲೂ ಯಜ್ಞಗ್ಗಳನ್ನು ನೆರವೇರಿಸಿ ದೇವತೆಗಳನ್ನೂ ಋಷಿಗಳನ್ನೂ ತೃಪ್ತಿಗೊಳಿಸುತ್ತಿರುವುದರಿಂದ ರಕ್ಷಕನೆನಿಸಿದ್ದಾನೆ.

ಸಾಯಣ ಭಾಷ್ಯ - **ಅಗ್ನಿ: ವೇ:** ಗನ್ತ್ರ್ಯಾ: ಸರ್ವತ್ರ ವ್ಯಾಪ್ತಾಯಾ: **ವಿಪ:** ಭೂಮ್ಯಾ: **ಅಗ್ರಂ** ಮುಖ್ಯಂ **ಪದಂ** ಸ್ಥಾನಂ **ಪಾತಿ** ರಕ್ಷತಿ । **ಯಹ್ವ:** ಮಹಾನಗ್ನಿ: **ಸೂರ್ಯಸ್ಯ ಚರಣಮ್** । ಚರತ್ಯನೇನೇತಿ ಚರಣಮನ್ತರಿಕ್ಷಂ **ಪಾತಿ** । **ನಾಭಾ** ನಾಭೌ ಅಂತರಿಕ್ಷಸ್ಯ ಮಧ್ಯೇ **ಸಪ್ತಶೀರ್ಷಾಣಂ** ಸಪ್ತಗಣಂ ಮರುದ್ಗಣಂ **ಪಾತಿ** । **ಋಷ್ವ:** ದರ್ಶನೀಯೋಽಯಮ್ **ಅಗ್ನಿ: ದೇವಾನಾಮ್ ಉಪಮಾದಮ್** ಉಪಮಾದಕಂ ಯಜ್ಞಂ **ಪಾತಿ** ರಕ್ಷತಿ । ಪಾತ್ಯಗ್ನಿರ್ವಿಪೋ ಅಗ್ರಮ್ - ಪಾತಿ ಪ್ರಿಯೇರಿಪೋ ಅಗ್ರಮ್ - ಇತಿ ಪಾಠೌ ॥

**ಋಷ್ವ:** ದರ್ಶನೀಯನಾದ **ಅಗ್ನಿ:** ಅಗ್ನಿ ಭಗವಂತನು **ವೇ:** ಪರಿ ಭ್ರಮಣಶೀಲವಾದ **ವಿಪ:** ಭೂಮಿಯ **ಅಗ್ರಂ** ಪ್ರಧಾನವಾದ **ಪದಂ** ಸ್ಥಾನ ವನ್ನು **ಪಾತಿ**

ರಕ್ಷಿಸುತ್ತಾನೆ. **ಯಹ್ವಃ** ಮಹಾಮಹಿಮನಾದ – ಯಹ್ವಃ ಮಹ ನ್ನಾಮ ನಿಘಂ೩-೩ । ಅಗ್ನಿಯು **ಸೂರ್ಯಸ್ಯ** ಸೂರ್ಯನ – ತಂ ಸರ್ವಾಣಿ ಭೂತಾನಿ ಸೋಽರ್ಯ ಇತ್ಯಯನ್ ತತ್ಸೋಽರ್ಯಸ್ಯ ಸೋಽರ್ಯತ್ವಂ ಸೋಽಯೋರ್ ನಾಮ್ಯೈಷ ತಂ ಸೂರ್ಯ ಇತಿ ಪರೋಕ್ಷಮಾಚಕ್ಷತೇ । ಜೈ ೩-೩೫೭ । ಸೂರ್ಯ ಆತ್ಮಾ ತೈ ಸಂ ೧-೪ ೪೩-೧ ॥ **ಚರಣಮ್** ಸಂಚಾರಸ್ಥಾನವಾದ ಅನ್ತರಿಕ್ಷವನ್ನು **ಪಾತಿ** ರಕ್ಷಿಸುತ್ತಾನೆ. **ನಾಭಾ** – ಅನ್ತರಿಕ್ಷದ ಮಧ್ಯದಲ್ಲಿ ಪ್ರಾಣಗಳನ್ನು ಶರೀರದೊಂದಿಗೆ ಬಂಧಿಸುವ ಕೇಂದ್ರದಲ್ಲಿ – ನಾಭೀರ್ವೈ ಪ್ರಾಣಾನ್ ದಾಧಾರ ಕಾಠ ೩೭-೧೬ । **ಸಪ್ತ ಶೀರ್ಷಾಣಂ** ಸಪ್ತ ಮರುದ್ಗಣಗಳನ್ನು ಮನಸ್ಸು ಬುದ್ಧಿ ಸಹಿತ ಪಂಚೇಂದ್ರಿಯಗಳನ್ನು ಕಣ್ಣು ಕಿವಿ ಮೂಗು ಬಾಯಿ ಎಂಬ ಜ್ಞಾನೇಂದ್ರಿಯಗಳನ್ನು – ಪ್ರಾಣೋ ವೈಶಿರಃ ಜೈ ೧-೨-೬೮ । ಪಾತಿ ರಕ್ಷಿಸುತ್ತಾನೆ. **ದೇವಾನಾಮ್** ದೇವತೆಗಳಿಗೆ **ಉಪಮಾದಮ್** ತೃಪ್ತಿಯನ್ನುಂಟು ಮಾಡುವ ಯಜ್ಞವನ್ನು **ಪಾತಿ** ರಕ್ಷಿಸುತ್ತಾನೆ.

ಮಹಾಮಹಿಮನೂ ದರ್ಶನೀಯನೂ ಆದ ಅಗ್ನಿ ಭಗವಂತನು ಭೂಮಿಯ ಮೇಲೆ ಅಗ್ನಿರೂಪದಿಂದಲೂ ಅನ್ತರಿಕ್ಷದಲ್ಲಿ ವಿದ್ಯುತ್ ಹಾಗೂ ಮರುದ್ಗಣ ರೂಪದಿಂದಲೂ ದ್ಯುಲೋಕದಲ್ಲಿ ಸೂರ್ಯರೂಪದಿಂದಲೂ ವ್ಯಾಪಿಸಿ ರಕ್ಷಿಸುತ್ತಿದ್ದಾನೆ. ಯಜ್ಞದಲ್ಲಿ ಅರ್ಪಿಸುವ ಆಹುತಿಯನ್ನು ಸ್ವೀಕರಿಸಿ ದೇವತೆಗಳಿಗರ್ಪಿಸಿ ಅವರನ್ನು ತೃಪ್ತಿಗೊಳಿಸುತ್ತಾ ಯಜ್ಞವನ್ನು ರಕ್ಷಿಸುತ್ತಾನೆ.

*ಭೂಸ್ಥಾನೀಯಂ ವಹ್ನಿದೇವಂ ವಿಶುದ್ಧಂ*
*ದ್ಯುಸ್ಥಾನೀಯಂ ಸೂರ್ಯದೇವಂ ಮಹಾದ್ವಂ ।*
*ಮಧ್ಯವ್ಯಾಪ್ತರ್ ಮಾರುತರ್ ಶಕ್ರಮಿತ್ರರ್*
*ಕಾಯ್ವರ್ ನಮ್ಮೀ ಜನ್ಮಮಂ ಬನ್ನದಿಂದಂ ॥*

॥ ಅಗ್ನೇರಿಲಾಂದಂ । ಪಂಚಾನುಗಾನಮ್ । ಅಗ್ನಿಸ್ತ್ರಿಷ್ಟುಬಗ್ನಿಃ॥ ತತ್ರಚತುರ್ಥಮಿದಮ್॥

**೧೨೬.೧. ಇಯಾಽ೨ । ೩। ಇಯಾಹಾಉ । ೩ । ಇನ್ದ್ರನ್ನರೋ । ನೇಽ೩ಮಧಿ । ತಾಹವನ್ತಾ೩ । ಹವನ್ತೇಽ೩ । ಹಉ\ಹಉ\ಹಜ್‌ಹ ಉ\ಹಉ\ । ೨-೩ । ಹವನ್ತೇ । ೩ ॥ ಯತ್ಪಾರಿಯಾಃ । ಯುನಜ । ತಾ೩ಧಿಯಸ್ತಾಃ । ಧಿಯಸ್ತಾಽ೩ಃ । ಹಉ\ಹಉ\ಹಜ್‌ಹಉ\ಹಉ\ ।**

೨-೩ । ಧಿಯಸ್ತಾಃ । ೩ ॥ ಶೂರೋಽನೃಷಾ । ತಾಽ೩ಶ್ರವ । ಸಶ್ಚಕಾ

ಮಾಇ । ಚಕಾಮೇಽ೩ । ಹಉ\ಹಉ\ಹಜ್‌ಹಜ್‌ಹಉ\ । ೨-೩ ।

ಚಕಾಮೇ । ೩ ॥ ಆಗೋಽಮತಾಇ । ವ್ರಜೇಭ । ಜಾತುವನ್ನಾಃ ।

ತುವನ್ನಾಽ೩ಃ । ಹಉ\ಹಉ\ಹಜ್‌ಹಜ್‌ಹಉ\ । ೨-೩। ತುವನ್ನಃ ।

೩ । ಇಯಾಽ೨ । ೩। ಇಯಾಹಾಉ । ೨ । ಇಯಾಽ೩ಹಾಉ ।

ವಾ ॥ ಏ । ವ್ರತಮೇಽಸುವರೇಽಶಕುನಃ ॥

*ದೀ - ೫೧ । ಪ - ೬೩ । ಮಾ - ೨೬ । ಗೂ ॥ ೪.೨೧೦ ॥*

ಈ ೨೧೦ನೆಯ ಗಾನವು ಇನ್ದ್ರನ್ನರೋ ನೇಮಧಿತಾ ಎಂಬ ೩೧೮ನೆಯ ಋಕ್ ಮೇಲೆ ಅಧಿಷ್ಠಿತವಾಗಿದೆ.

ಸ್ತೋಭ ಭಾಷ್ಯ - ತಥಾ ಇನ್ದ್ರಂ ನರಃ ಅಗ್ನಿರೇವ ಇನ್ದ್ರರೂಪೇಣ ಹೂಯತೇ ॥ ಅಗ್ನಿಯನ್ನೇ ಇನ್ದ್ರರೂಪದಿಂದ ಈ ಗಾನದ ಮೂಲಕ ಆಹ್ವಾನಿಸಲಾಗುತ್ತಿದೆ । ಸಾಮ ೨೧೦ ॥

## ಋಕ್ - ೬೧೫

॥ ವಾಮದೇವೋಗೌತಮಃ ಪಙ್ಕ್ತಿರಗ್ನಿಃ ॥

ಭ್ರಾಜನ್ತ್ಯಗ್ನೇ ಸಮಿಧಾನ ದೀದಿವೋ ಜಿಹ್ವಾ ಚರತ್ಯನ್ತರಾಸನಿ । ಸ ತ್ವಂ ನೋ ಅಗ್ನೇ ಪಯಸಾ ವಸುವಿದ್ರಯಿಂ ವರ್ಚೋ ದೃಶೇದಾಃ ॥ ೧-೬೧೫ ॥

೧ ೨ರ ೩ ೨ ೩ ೨
ಭ್ರಾಜನ್ತಿ–ಅಗ್ನೇ–ಸಮಿಧಾನ–ಸಮ್–ಇಧಾನ–ದೀದಿವಃ । ಜಿಹ್ವಾ–ಚರತಿ–ಅನ್ತಃ
೩ ೧ ೨ ೩ ೧ ೨ರ ೩ ೨ ೩ ೨ ೩ ೨
–ಆಸನಿ ॥ ಸಃ–ತ್ವಮ್–ನಃ–ಅಗ್ನೇ–ಪಯಸಾ–ವಸುವಿತ್–ವಸು–ವಿತ್ । ರಯಿ
೧ ೨ರ ೩ ೨ ೩
ಮ್–ವರ್ಚಃ–ದೃಶೇ–ದಾಃ ॥ ೧–೬೧೫ ॥

॥ ಅಗ್ನೇರಿಲಾಂದಂ । ಪಂಚಾನುಗಾನಮ್ । ಅಗ್ನಿಃಪಙ್ಕ್ತಿರಿನ್ದ್ರಃ । ತತ್ರ ಪಂಚಮಮಿದಂ ॥

೨ರ ೦ ೦ ೧ ೨ ೧ ೦ ೦ ೨
೧೨೭.೧. ಭ್ರಾಜಾಔಹೋೞಹೋೞಹಾಇ । ತ್ಯಗ್ನೇಸಮಿಧಾನಾದೀಽ೧
೦ ೦ ೧ ೨ ೧ ೨
ದಿವಾಽ೨ಃ ॥ ಜಿಹ್ವಾಔಹೋೞಹೋೞಹಾಇ । ಚರತ್ಯನ್ತಾರಾಽ೧ಸಾ
೦ ೦ ೧ ೨ ೧೦ ೦ ೦ ೨
ನೀೞ೨ ॥ ಸತ್ವಾಔಹೋೞಹೋೞಹಾಇ । ನೋೞಅಗ್ನೇಪಯಸಾವಸೂಽ
೨ ೧ ೨ ೩ಕ ೨ ೧ ೧
೩ವೀತ್ ॥ ರಯಿಂವರ್ಚೋೞದೃಶೌಹೋೞ೩ । ಹಿಮ್ಮಾಽ೨ । ದಾ ।
೨ ೪ ೫ ೪
ಔಽ೩ಹೋೞವಾ । ಹೋೞಽ೫ಇ ॥ ಡಾ ॥

*ದೀ – ೧೩ । ಪ – ೧೨ । ಮಾ – ೧೦ । ಶೌ ॥ ೫.೨೧೧ ॥*

ಸ್ತೋಭ ಭಾಷ್ಯ – ಅಗ್ನೇ ಸಮಿಧಾನ ದೀಪ್ಯಮಾನ ದೀದಿವಃ ಅತಿಶಯೇನ ದೀಪ್ಯಮಾನ ತವ ಆಸನಿ ಆಸ್ಯೇ ಜಿಹ್ವಾ ಭ್ರಾಜನ್ತಿ ಚರನ್ತಿ ಸ ತ್ವಂ ನಃ ಅಸ್ಮಭ್ಯಂ ಅಗ್ನೇ ವಸುವಿತ್ ಪಯಸಾ ಹವಿಷಾ ತೃಪ್ತಃ ದೃಶೇ ಚ ದರ್ಶನಾಯ ರಯಿಂ ಧನಂ ವರ್ಚಃ ದೀಪ್ತಿಂ ದಾಃ ದೇಹಿತ್ಯರ್ಥಃ ಸಾ ॥ ೨೧೧ ॥

ದೇದೀಪ್ಯಮಾನನಾಗಿ ಅತಿಶಯ ಕಾಂತಿಯಿಂದ ಬೆಳಗುತ್ತಿರುವ ಧನವಂತನಾದ ಅಗ್ನಿ ಭಗವಂತನೇ ನಿನ್ನ ಬಾಯಿಯಲ್ಲಿ ಜ್ವಾಲೆಯಂತೆ ಚಲಿಸುತ್ತಿರುವ ನಾಲಗೆಯಿಂದ ನಾವು ಅರ್ಪಿಸುವ ಹವಿಸ್ಸನ್ನು ಸ್ವೀಕರಿಸಿ ತೃಪ್ತನಾಗಿ ನಿನ್ನ ದರ್ಶನವನ್ನೂ ಐಶ್ವರ್ಯವನ್ನೂ ವರ್ಚಸ್ಸನ್ನೂ ಕಾಂತಿಯನ್ನೂ ಅನುಗ್ರಹಿಸು. ॥ ಸಾ ೨೧೧ ॥

ಸಾಯಣ ಭಾಷ್ಯ – ಸಮಿಧಾನ ಋತ್ವಿಗ್ಭಿಃ ಸಮಿಧ್ಯಮಾನ ದೀಪ್ತ ಹೇ ಅಗ್ನೇ ಭ್ರಾಜನ್ತೀ ಪ್ರಕಾಶಮಾನಾ ಆಸನಿ ಆಸ್ಯೇ ಅಂತರ್ಮಧ್ಯೇ ಸ್ಥಿತಾ ತ್ವದೀಯಾ ಜಿಹ್ವಾಃ ಹವೀಂಷಿ ಚರತಿ ಭಕ್ಷಯತಿ । ಹೇ ಅಗ್ನೇ ವಸುವಿತ್ ಧನಲಮ್ಭಕ ತ್ವಮ್

ಅಸ್ಮಭ್ಯಂ ಪಯಸಾ ಅನ್ನೇನ ಸಹ ರಯಿಂ ರಮಣೀಯಂ ಧನಂ ದೃಶೇ ದರ್ಶನಾಯ ವರ್ಚಃ ತೇಜಶ್ಚ ತೇಜಸ್ವೀ ತ್ವಂ ವಾ ಅದಾಃ ದೇಹಿ ॥

**ಸಮಿಧಾನ ಅಗ್ನೇ** ಪ್ರದೀಪ್ತನಾಗಿ ಪ್ರಜ್ವಲಿಸುತ್ತಿರುವ ಅಗ್ನಿ ಭಗವಂತನೇ **ಭ್ರಾಜನ್ತೀ ಆಸನಿ** ಹೊಳೆಯುತ್ತಾ ತೇಜಸ್ವಿಯಾಗಿರುವ ನಿನ್ನ ಮುಖದಲ್ಲಿ **ಜಿಹ್ವಾ** ನಾಲಿಗೆ ರೂಪೀ ಜ್ವಾಲೆಯು ಪ್ರಕಾಶವಾಗುತ್ತಿರುವ ವಾಕ್ ವಾಣೀ–ಜಿಹ್ವಾ ವಾಙ್‌ನಾಮ ನಿಘಂ ೧–೧೧ । ಚರತಿ ಹವಿಸ್ಸನ್ನು ಸ್ವೀಕರಿಸುತ್ತಿದೆ ಭಕ್ಷಿಸುತ್ತಿದೆ ಚಲಿಸುತ್ತಿದೆ. **ವಸುವಿತ್ ಅಗ್ನೇ** ಧನಧಾನ್ಯಗಳ ಒಡೆಯನಾದ ಅಗ್ನಿ ಭಗವಂತನೇ **ಸಃ ತ್ವಮ್** ಆ ನೀನು **ನಃ** ನಮಗೆ **ಪಯಸಾ** ಹಾಲು ಅನ್ನ ಸಂಕೇತವಾದ ಸಮಸ್ತ ಭೋಗ ಭಾಗ್ಯಗಳನ್ನೂ ಪ್ರಾಣ ಶಕ್ತಿಗಳನ್ನೂ – ಪ್ರಾಣಃ ಪಯಃ ಶ ೬–೫–೪–೧೫ **ರಯಿಮ್** ಪುಷ್ಟಿಯುಕ್ತವಾದ ಆರೋಗ್ಯವನ್ನೂ – ಪುಷ್ಟಂ ವೈರಯಿಃ ಶ ೨–೩–೪–೧೩ । **ದೃಶೇ ವರ್ಚಃ** ಆಕರ್ಷಕವಾದ ದರ್ಶನೀಯವಾದ ಬ್ರಹ್ಮ ವರ್ಚಸ್ಸನ್ನೂ ತೇಜಸ್ಸನ್ನೂ **ಅದಾಃ** ಅನುಗ್ರಹಿಸು.

ಪ್ರಜ್ವಲಿಸುತ್ತಿರುವ ಅಗ್ನಿ ಭಗವಂತನೇ ಹೊಳೆಯುತ್ತಿರುವ ನಾಲಿಗೆಯಂತಿರುವ ಜ್ವಾಲೆಗಳಿಂದ ಹವಿಸ್ಸನ್ನು ಸ್ವೀಕರಿಸುತ್ತಿರುವುದು ನಾಲಿಗೆಯನ್ನು ಹೊರಳಿಸುತ್ತಾ ಸಂದೇಶವನ್ನು ನೀಡುತ್ತಿರುವೆಯೋ ಎಂಬಂತೆ ತೋರುತ್ತಿದೆ. ಧನಧಾನ್ಯಗಳ ಒಡೆಯನಾದ ನೀನು ಸಾತ್ವಿಕವಾದ ಭೋಗಭಾಗ್ಯಗಳನ್ನೂ ಉತ್ತಮವಾದ ಆರೋಗ್ಯವನ್ನೂ ಕರುಣಿಸು.

*ಜ್ವಾಲಾಲೀಲಾ ! ವೀತಿಹೋತ್ರ ! ತ್ವದೀಯಂ*
*ತೇಜಃಪೂರ್ಣಂ ವಕ್ತ್ರಮೀ ಜ್ವಾಲೆ ಜಿಹ್ವೆ ।*
*ಕೊಳ್ ನೀನಿಲ್ಲಿಂ ಹವ್ಯಮಂ ! ನೀಳ್ವುದಂತೆ*
*ಪ್ರೇಯಶ್ರೇಯಸ್ಸರ್ವಸಂಪತ್ತಿಯೆಲ್ಲಂ ॥*

॥ **ದೇವವ್ರತಾನಿ ತ್ರೀಣಿ** ॥ ತ್ರೀಣಿ ದೇವಾನಾಂ ವ್ರತಾನಿ ದೇವಸ್ಯವಾ । ರೌದ್ರೇ ಪೂರ್ವೇ ವೈಶ್ವದೇವಂ ತೃತೀಯಮ್ । ವೈಶ್ವದೇವೇ ವಾ ಪೂರ್ವೇ ರೌದ್ರಂ ತೃತೀಯಮ್ । ದ್ವಯೋ ರುದ್ರೋ ಅನುಷ್ಟುಪ್ ರುದ್ರಃ ॥ ತೃತೀಯಸ್ಯ ವಿಶ್ವೇದೇವಾ ಅನುಷ್ಟುಬಿನ್ದ್ರಃ ರುದ್ರಃ ॥

ಈ ಗಾನಗಳಿಗೆ ಋಕ್ ಇಲ್ಲ. ಈ ಗಾನಗಳಲ್ಲಿನ ಸ್ತೋಭ ಪದಪಾಠ ಹೀಗಿದೆ.

೧೨೦ ೧೨೦ ೩ ೧ ೨೦ ೧ ೨೦ ೩ ೧೨೦ ೧೨೦ ೩ ೨
ಅಧಿ ಪತೇ–ಅಧಿ –ಪತೇ–ಮಿ ತ್ರ ಪತೇ–ಮಿ ತ್ರ –ಪತೇ–ಕ್ಷ ತ್ರ ಪತೇ–ಕ್ಷ ತ್ರ –ಪತೇ–ಸ್ವಃಪತೇ –
೧೨ ೩ ೧೨೦ ೧೨೦ ೩ ೧೨೦ ೩ ೧ ೨ ೩ ೨ ೩ ೨ ೧
ಸ್ವಃರಿತಿ–ಪತೇ–ಧ ನ ಪತೇ–ಧ ನ –ಪತೇ–ನಮಃ–ಮನ್ಯುನಾ– ವೃತ್ರಹಾ–ವೃತ್ರ–ಹಾ–ಸೂ
೨೦ ೩ ೨ ೩ ೨ ೩ ೧ ೨ ೩ ೧ ೨ ೧೨೦ ೩ ೨ ೩ ೨
ರ್ಯೇಣ–ಸ್ವರಾಟ್–ಸ್ವ–ರಾಟ್–ಯಜ್ಞೇನ–ಮಘವಾ–ದ ಕ್ಷಿ ಣಾ–ಅಸ್ಯ–ಪ್ರಿಯಾ –ತನೂಃ–

೧ ೨೦ ೧೨೦ ೩ ೨ ೧೨೦ ೩ ೧ ೨ ೩ ೧ ೨ ೩ ೧೨೦ ೧೨೦
ರಾಜ್ಞಾ–ವಿ ಶ ಮ್–ದಾಧಾರ–ವೃಷಭಃ–ತ್ವಷ್ಟಾ–ವೃತ್ರೇಣ–ಶಚೀಪತಿಃ –ಶಚೀ–ಪ ತಿ ಃ–ಅನ್ನೇ

೧೨೦ ೩ ೨ ೩ ೨ ೩ ೧ ೨ ೧೨೦ ೩ ೨ ೩ ೨ ೩ ೧ ೨
ನ–ಗಯಃ–ಪೃಥಿವ್ಯಾ–ಸೃಣಿಕಃ–ಅಗ್ನಿನಾ–ವಿ ಶ್ವ ಮ್–ಭೂತಮ್–ಅಭಿ–ಅವಃ–ವಾಯುನಾ–

೧೨೦ ೩ ೨ ೩ ೨ ೩ ೨ ೩ ೧ ೨ ೩ ೧ ೨ ೩ ೨
ವಿಶ್ವಾಃ–ಪ್ರಜಾಃ–ಪ್ರ–ಜಾಃ–ಅಭಿ–ಅಪವಥಾಃ–ವಷಟ್ಕಾರೇಣ–ವಟ್–ಕಾರೇಣ–ಅರ್ಧಭಾ

೩ ೨ ೧ ೨೦ ೩ ೨ ೩ ೨ ೧೨೦ ೩
ಕ್–ಅರ್ಧ–ಭಾಕ್–ಸೋಮೇನ–ಸೋಮಪಾಃ–ಸೋಮ–ಪಾಃ–ಸಮಿತ್ಯಾ–ಸಮ್–ಇತ್ಯಾ–

೨ ೩ ೨ ೧ ೨೦ ೨ ೧ ೨ ೩ ೧೨೦ ೩ ೧
ಪರಮೇಷ್ಠೀ–ಪರಮೇ–ಸ್ಥೀ–ಯೇ–ದೇವಾಃ–ದೇವಾಃ–ದಿವಿಷದಃ–ದಿವಿ–ಸ ದ ಃ–ಅನ್ತರಿಕ್ಷಸ

೨ ೩ ೧೨೦ ೩ ೧ ೨ ೩ ೧೨೦ ೩ ೧ ೨ ೩ ೨೦ ೩ ೧ ೨
ದಃ–ಅನ್ತರಿಕ್ಷ–ಸ ದ ಃ–ಪೃಥಿವೀಷದಃ–ಪೃಥಿವೀ–ಸ ದ ಃ–ಅಪ್ಸುಷದಃ–ಅಪ್ಸು–ಸದಃ–ದಿಕ್ಷುಸದಃ

೩ ೧೨೦ ೩ ೧೨೦ ೩ ೧೨೦ ೧೨೦ ೩ ೧ ೨ ೧೨೦
–ದಿಕ್ಷು–ಸ ದ ಃ–ಆಶಾಸ ದ ಃ–ಆಶಾ–ಸ ದ –ಸ್ಥ–ತೇ ಭ್ಯಃ–ವಃ–ದೇವಾಃ–ದೇವೇಭ್ಯಃ–ನಮಃ–

೧೨೦ ೩ ೧೨೦ ೩ ೨ ೩ ೧ ೨ ೩ ೨
ಅ ವ –ಜ್ಯಾಮ್–ಇವ–ಧ ನ್ವ ನಃ–ವಿ–ತೇ–ಮನ್ಯುಮ್–ನಯಾಮಸಿ–ಮೃಡತಾಮ್ –ನಃ–ಇ

೩ ೧ ೨ ೩ ೨ ೧೨೦ ೩ ೨ ೩ ೧೨೦
ಹ–ಅಸ್ಮಭ್ಯಮ್–ಯಃ–ಇದಮ್–ವಿ ಶ್ವ ಮ್–ಭೂತಮ್–ಯುಯೋ–ನಮಃ ॥

೧ ೨ ೧ ೨ ೧ ೨ ೧
೧. ಅಧಿಪ । ತಾಇ । ಮಿತ್ರಪ । ತಾಇ । ಕ್ಷತ್ರಪ । ತಾಇ । ಸ್ವಃ

೨ ೧ ೨ — — ೧ ೨ ೧ ೦ ೨ ೧೦
ಪತಾಇ । ಧನಪತಾಽ೨ಇ । ನಾಽ೨ಮಾಃ ॥ ಮನ್ಯುನಾವೃತ್ರಹಾ

೦ ೦ ೨ ೧೦ ೨ ೧೦ ೨ ೧ ೨೦ ೧ ೨೦ ೧೦ ೨ ೧೦ ೦ ೨೦
ಸೂರ್ಯೇಣಸ್ವರಾಡ್ಯಜ್ಞೇನಮಘವಾದಕ್ಷಿಣಾಸ್ಯಪ್ರಿಯಾತನೂರಾಜ್ಞಾ

೧ ೨೦ ೦ ೧ ೦ ೨ ೧೦ ೨ ೦ ೧ ೨ ೧೦ ೨ ೧ ೨
ವಿಶಂದಾಧಾರ । ವೃಷಭಸ್ತ್ವಷ್ಟಾವೃತ್ರೇಣಶಚೀಪತಿರನ್ನೇನಗಯಃಪೃ

೧೦ ೨ ೧೦ ೦ ೨೦ ೧ ೨ ೦ ೦ ೧ ೦ ೦
ಥಿವ್ಯಾಸೃಣಿಕೋಽಗ್ನಿನಾವಿಶ್ವಂಭೂತಮ । ಭ್ಯಭವೋವಾಯುನಾವಿಶ್ವಾಃ

೨ ೧೦ ೨ ೦ ೦ ೧೦ ೦ ೨ ೧೦ ೦ ೦ ೨ ೦
ಪ್ರಜಾಅಭ್ಯಪವಥಾವಷಟ್ಕಾರೇಣಾರ್ಧಭಾಕ್ಸೋಮೇನಸೋಮ

೧೦ ೨೦ ೦ ೧೦ ೦ ೦ ೨೦ ೦ ೦ ೧ ೨ ೧
ಪಾಸ್ಸಮಿತ್ಯಾಪರಮೇಷ್ಠೀ । ಯೇದೇವಾದೇವಾಃ । ದಿವಿಷದಃ । ಸ್ಥ

೦ ೦ ೨೦ ೦ ೦ ೦ ೧೦ ೨೦ ೧ ೨ ೧೦ ೦ ೨೦ ೦ ೦
ತೇಭ್ಯೋವೋದೇವಾದೇವೇಭ್ಯೋನಮಃ । ಯೇದೇವಾದೇವಾಃ ।

೧ ೨ ೧ ೦ ೦ ೨೦ ೦ ೦ ೦ ೧೦ ೨೦ ೧ ೨ ೧೦
ಅನ್ತರಿಕ್ಷಸದಃ । ಸ್ಥತೇಭ್ಯೋವೋದೇವಾದೇವೇಭ್ಯೋನಮಃ । ಯೇ

೦ ೨೦ ೦ ೦ ೦ ೧ ೨ ೧ ೦ ೦ ೨೦ ೦ ೦ ೦ ೧೦
ದೇವಾದೇವಾಃ । ಪೃಥಿವೀಷದಃ । ಸ್ಥತೇಭ್ಯೋವೋದೇವಾದೇವೇ
೨೦ ೧ ೨ ೧೦ ೦ ೨೦ ೦ ೦ ೧ ೨ ೧ ೦ ೦
ಭ್ಯೋನಮಃ । ಯೇದೇವಾದೇವಾಃ । ಅಪ್ಸುಷದಃ । ಸ್ಥತೇಭ್ಯೋ
೨೦ ೦ ೦ ೦ ೧೦ ೨೦ ೧ ೨ ೧೦ ೦ ೨೦ ೦ ೦ ೧
ವೋದೇವಾದೇವೇಭ್ಯೋನಮಃ । ಯೇದೇವಾದೇವಾಃ । ದಿಕ್ಷುಸ
೨ ೧ ೦ ೦ ೨೦ ೦ ೦ ೦ ೧೦ ೨೦ ೧ ೨ ೧೦ ೦ ೨೦
ದಃ । ಸ್ಥತೇಭ್ಯೋವೋದೇವಾದೇವೇಭ್ಯೋನಮಃ । ಯೇದೇವಾ
೦ ೦ ೦ ೦ ೧ ೨ ೧ ೦ ೦ ೨೦ ೦ ೦ ೦ ೧೦ ೨೦ ೧
ದೇವಾಃ । ಆಶಾಸದಃ । ಸ್ಥತೇಭ್ಯೋವೋದೇವಾದೇವೇಭ್ಯೋನ
೨ ೧ ೨ ೧೦ ೨ ೧ ೨೦ ೧ ೦ ೨ ೧ ೨೦ ೧ ೦ ೨
ಮಃ । ಅವಜ್ಯಾಮಿವಧನ್ವನೋವಿತೇಮನ್ಯುನ್ನಯಾಮಸಿಮೃಡತಾನ್ನ
೧ ೨ ೧ ೨ ೧ ೨ ೧ ೦
ಇಹ ॥ ಅಸ್ಮಭ್ಯಮ್ । ಇಡಾऽ೨೩ಭಾ ॥ ಯಇದಂವಿಶ್ವಂಭೂ
೨ ೧ ೫
ತಮ್ । ಯುಯೋऽ೩ಆಲು । ವಾऽ೨೩ ॥ ನಾऽ೨೩೪ಮಾಃ ॥

*ದೀ - ೧೨೬ । ಪ - ೩೭ । ಮಾ - ೩೨ । ಖಾ ॥ ೬೨೧೨ ॥*

ಪ್ರಕೃತ ಪಠಿತವಾಗಿರುವ ೨೧೨ ಮತ್ತು ಪಠಿತವಾಗುತ್ತಿರುವ ಮುಂದಿನ ೨೧೩, ೨೧೪ ಸಾಮಗಾನಗಳು ದೇವವ್ರತ ಸಾಮಗಳೆಂದು ಪ್ರಸಿದ್ಧವಾಗಿವೆ. ವಿಷ್ಣು ಸಹಸ್ರನಾಮದಲ್ಲಿ ೫೭೪ನೆಯ ನಾಮವಾಗಿರುವ **ತ್ರಿಸಾಮಾ** - ದೇವವ್ರತಸಾಮಾ ಖ್ಯಾತೈಸ್ತ್ರಿಭಿಃ ಸಾಮಗೈಃ ಸ್ತುತ । ಎಂದು ಪುರಾಣ ಪ್ರಸಿದ್ಧವಾಗಿಯೂ ಇದೆ. ಸ್ತೋಭ ಮಯವಾದ ಈ ಸಾಮಗಾನಗಳಿಗೆ ಋಕ್ಕುಗಳಿಲ್ಲವಾಗಿ ಛಂದಸ್ಸಿಲ್ಲ. ಈ ಮನ್ತ್ರಗಳಿಗೆ ಸಾಯಣರು ಭಾಷ್ಯ ಬರೆದಿಲ್ಲ. ಶ್ರೀ ಭಟ್ಟ ಶೋಭಾಕರರೆಂಬುವರು ಬರೆದಿರುವ ಸ್ತೋಭಭಾಷ್ಯವನ್ನೂ ಶ್ರೀಮದಪ್ಪಯ್ಯದೀಕ್ಷಿತರ ವಂಶಸ್ಥರಾದ ಶ್ರೀ ತ್ಯಾಗರಾಜಮಖಿಗಳು ಬರೆದಿರುವ ಸಾಮರುದ್ರಸಂಹಿತಾ ಭಾಷ್ಯವನ್ನೂ ಅನುಸರಿಸಿ ಈ ಕನ್ನಡ ಅವತರಣಿಕೆಯು ಮೈದಳೆದಿದೆ.

ಸ್ತೋಭ ಭಾಷ್ಯ - ಭಗವಾನ್ ರುದ್ರ ಸರ್ವಸ್ಯ ಅಧಿಪತೇ ಕ್ಷತ್ರಪತೇ ರಾಜಾದೀನಾಂ ಪತೇ । ಸ್ವಃ - ಪತೇ ಸೂರ್ಯಸ್ಯ ಪತೇ । ಧನಪತೇ ತುಭ್ಯಂ ನಮಃ। ಪ್ರಹ್ವೋಭವಾಮಿ । ಯಸ್ತ್ವಂ ಮನ್ಯುನಾ ಕರಣ ಭೂತೇನ ವೃತ್ರಹಾ । ಸೂರ್ಯೇಣ ಸ್ವರಾಟ್ ಸೂರ್ಯರೂಪೇಣ ಜಗದಧ್ಯಕ್ಷತಯಾ ಪರಮೇಶ್ವರಃ । ಯಜ್ಞೇನ ಮಘವಾ ಇನ್ದ್ರ ಭೋಕ್ತಾ । ದಕ್ಷಿಣಾ ಗೌಃ ಅಸ್ಯಪ್ರಿಯಾ ತನೂಃ ಯಾಗಸಾಧನತ್ವಾತ್ ರಾಜ್ಞಾ ರಾಜರೂಪೇಣ ವಿಶಂ ಪ್ರಜಾಂ ದಾಧಾರ ಧಾರಯಸಿ ರಕ್ಷಸಿ ।

**ವೃಷಭಃ** ವರ್ಷಿತಾ ತ್ವಷ್ಟಾ ತೂರ್ಣಂ ವ್ಯಾಪಕಃ **ವೃತ್ರೇಣ** ವರಣ–ಕರ್ತಾ ನಿಮಿತ್ತಭೂತೇನ **ಶಚೀಪತಿಃ** ವೃತ್ರದಾರಣಾತ್ಮಕಸ್ಯ ಕರ್ಮಣಃ ಪತಿಃ । **ಅನ್ನೇನ** ಗಯಃ ಗೃಹಸ್ಥಃ **ಪೃಥಿವ್ಯಾ ಸೃಣಿಕಃ** ಅಂಕುಶ ಹಸ್ತ ಇವ । ಕರ್ಮ ಭೂಮಿಃ ಪೃಥಿವೀ ತತ್ರಸ್ಥಾಃ ಪರಮೇಶ್ವರ ನಿಯೋಗಾನುಪಾಲನಂ ಕೇಚಿದಾಚರನ್ತಿ ನಿಯೋಗಾತಿಕ್ರಮಂ ಅಧರ್ಮಂ ಕೇಚಿದಾಚರನ್ತಿ । ತಾಭ್ಯಾಂ ಧರ್ಮಾಧರ್ಮಾಭ್ಯಾಂ ಸರ್ವಸ್ಯ ಪ್ರಾಣಿ ಜಾತಸ್ಯ ಪರಿಗೃಹೀತತ್ವಾತ್ ಉಪಚಾರತ್ ಪೃಥಿವ್ಯಾ ಅಂಕುಶ ಸ್ಥಾನೀಯಯಾ ಪರಿಗ್ರಹ ಉಕ್ತಃ । **ಅಗ್ನಿನಾ** ಆಹವನೀಯಾದಿರೂಪೇಣ ದೇವಾದಿ **ವಿಶ್ವಂ ಭೂತಂ ಅಭ್ಯಭವಃ** ಅಭಿಭವಸಿ । **ವಾಯುನಾ** ಪ್ರಾಣಾನುಗ್ರಾಹಕೇಣ **ವಿಶ್ವಾಃ ಪ್ರಜಾಃ ಅಭ್ಯ ಪವಥಾಃ** ಅಭಿಪವಸೇ ಪವಿತ್ರೀಕರೋಷಿ । ಶವರೂಪತಾಮಪಸಾರ್ಯಂ ಜೀವ ಯಸೀತಿ । **ವಷಟ್ಕಾರೇಣ** ವಷಟ್ಕಾರಸ್ವಾಹಾಕಾರ ಸ್ವಧಾಕಾರ ನಮಸ್ಕಾರೈಃ ಭೋಗ್ಯಂ ಭೋಕ್ತ್ರಪೇಕ್ಷಯಾ ಅರ್ಥಂ ಭಜತ ಇತ್ಯರ್ಥಭಾಕ್ । ಕತಮೋ ದೇವೋಹ್ಯರ್ಧಭಾಗಿತ್ಯಾರಣ್ಯಶ್ರವಣಾತ್ – ಏವಂ ಭೋಗ್ಯಂ – **ಸೋಮೇನ** ಯಾಗಗತೇನ **ಸೋಮಪಾಃ** ಚನ್ದ್ರಮಸಂ ಪಿಬತಿ । **ಸಮಿತಿಃ** ಪತ್ನ್ಯಾ ಸಹ ಸಂಗತಿಃ ತಯಾ ಪರಮೇ ಸ್ಥಾನೇ ಗೃಹಸ್ಥಾಧಿಕಾರೇ ತಿಷ್ಠತೀತಿ **ಪರಮೇಷ್ಠೀ** । ಏವಂ ರುದ್ರಸ್ಯ ಸರ್ವಾತ್ಮಕ ತ್ವಾತ್ **ಯೇ ದೇವಾಃ** ರುದ್ರಾದಯೋ ಯೂಯಂ ದೇವಾಃ ದಿವಿ ಸೀದನ್ತೀತಿ **ದಿವಿಷದಃ ಸ್ಥ** । ಹೇ ದೇವಾಃ ತೇಭ್ಯಃ ವಃ ಯುಷ್ಮಭ್ಯಂ ದೇವೇಭ್ಯಃ ನಮೋಽಸ್ತು । ಏವಂ **ಅನ್ತರಿಕ್ಷಸದ್ಭ್ಯಃ ಪೃಥಿವೀಷದ್ಭ್ಯಃ ಅಪ್ಸುಷದ್ಭ್ಯಃ ದಿಕ್ಷುಸದ್ಭ್ಯಃ ಆಶಾಸದ್ಭ್ಯಃ** ನಮಃ **ಆಶಾ** ಅವಾನ್ತರದಿಶಃ ಧನ್ವನಃ ಧನುಷಃ ಜ್ಯಾ ಯಥಾ ಕ್ರೋಧ್ವಪಗಮೇ ಅಪನೀಯತೇ ಏವಂ ತೇ ತವ ರುದ್ರಸ್ತುತ್ಯಾ **ಮನ್ಯುಂ** ವಿನಯಾಮಸಿ ನಿವಾರಯಾಮಃ । ಭಗವಾನ್ ನಃ ಅಸ್ಮಾನ್ ಇಹ **ಮೃಡತಾಂ** ಸುಖಯತು । ಅಸ್ಮಭ್ಯಂ ಇಡಾ ಭಾ ಭವೇತ್ । ಯಃ ಇದಂ **ವಿಶ್ವಂ ಭೂತಂ ಯುಯೋ** ಯೋಜಯತಿ ॥ ಅರಸಾಮ ೨೧೨ ॥

**ಅಧಿಪತೇ ನಮಃ** ಸಮಸ್ತಕ್ಕೂ ಸರ್ವರಿಗೂ ಆಧಾರವಾಗಿರುವ ಒಡೆಯನೇ ಭಗವಂತನೇ ರುದ್ರನೇ ನಿನ್ನ ಸರ್ವೋತ್ಕರ್ಷವನ್ನು ಅನುಸಂಧಾನಮಾಡುತ್ತಾ ನಮ್ರರಾಗಿ ನಮಸ್ಕರಿಸುತ್ತೇವೆ. **ಮಿತ್ರಪತೇ** ಭಗವಂತನಾದ ಸೂರ್ಯನ ಒಡೆಯನೇ **ಕ್ಷತ್ರಪತೇ** ರಾಜಾಧಿರಾಜರುಗಳ ಒಡೆಯನೇ ವಿಷ್ಣು ದೇವೇನ್ದ್ರಾದಿಗಳೆಲ್ಲರ ಪ್ರಭುವೇ **ಸ್ವಃ ಪತೇ** – ಸ್ವರ್ಗಾದಿ ಸಮಸ್ತಲೋಕಗಳ ಒಡೆಯನೇ ಸರ್ವಾತ್ಮಾಧಿಪತ್ಯವುಳ್ಳವನೇ **ಧನ ಪತೇ** ಐಹಿಕವಾಗಿರುವ ಪಶುಪುತ್ರಾದಿಭೋಗಭಾಗ್ಯಗಳ ಒಡೆಯನೇ **ಮನ್ಯುನಾವೃತ್ರಹಾ** ಕ್ರೋಧಗೊಂಡು ಇನ್ದ್ರನ ಮೂಲಕ ವೃತ್ರಾದಿ ಶತ್ರುನಾಶಮಾಡುವವನೇ ಮನ್ಯುಃ ಪದಕ್ಕೆ ಇರುವ ಅನ್ಯ ಅರ್ಥಗಳೂ ಮನನೀಯವಾಗಿವೆ – ಮನ್ಯುರಿನ್ದ್ರೋ ಮನ್ಯುರೇವಾ ಸ ದೇವಃ ॥ **ಜ್ಞಾನವಾನ್** ಪ್ರಭು । ಋ.ಸಂ. ೧೦–೮೩–೨ ॥ ಇನ್ದ್ರೇಣ ಮನ್ಯುನಾ । ಜ್ಞಾನದೀಪ್ತ **ಪ್ರತಾಪಯುಕ್ತ** । ಅಥ. ೭–೬೩–೧ ॥ ಬ್ರಹ್ಮದ್ವಿಷಸ್ತಪನೋ ಮನ್ಯುಭೀರಸಿ । **ಕ್ರೋಧಾದಿಶತ್ರುನಾಶಕವಾಗಿರುವ** ಪರಮೇಶ್ವರನೇ ಮನ್ಯು ಸ್ವರೂಪವಾಗಿರುವುದರಿಂದ ಅನ್ಯರು ಮಾಡುವ ಕ್ರೋಧ ಅವನ ಮೇಲೆ ನಡೆಯಲಾರದು । ಋ.ಸಂ. ೨–೨೩–೪॥ ಸಮಸ್ಯ ಮನ್ಯವೇ ವಿಶೋ . . . । **ಮನ್ಯುರ್ಮನನ ಸಾಧನಂ ಸ್ತೋತ್ರಂ** । ಸಾ.ಭಾ.ಸಾ.ಋ. ೧೩೭ ॥ ಅರೇಷಸಃ . . . ಮನ್ಯುಮತ್ತಯಾಶ್ಚಿತೇ ಗೋಃ । ಅತ್ಯನ್ತ **ಪ್ರಕಾಶಮಯ** ಅತ್ಯನ್ತ

**ಮನನಶೀಲ** । ಅಥ. ೭-೨೨-೨ ॥ ಯಜ್ಞದಿಂದ ಪಾಪನಾಶ ಮಾಡುವವನೇ **ಸೂರ್ಯೇಣ ಸ್ವರಾಟ್** ಸೂರ್ಯರೂಪದಿಂದ ಸರ್ವಪ್ರಕಾಶಕನಾಗಿ ಜಗತ್ತಿನ ಅಧ್ಯಕ್ಷತಾರೂಪದಿಂದ ಪರಮೇಶ್ವರನೆನಿಸಿಕೊಂಡಿರುವವನೇ **ಯಜ್ಞೇನ ಮಘವಾ** ಶತಾಶ್ವಮೇಧಯಜ್ಞದ ಫಲಭೋಕ್ತೃವಾದ ಇನ್ದ್ರನೇ ವೃಷ್ಟಿರೂಪಿಯೇ **ದಕ್ಷಿಣಾಸ್ಯ ಪ್ರಿಯಾತನೂಃ** ಯಾಗ ಸಾಧನವಾದ ಗೋವು ಹಾಗೂ ದಕ್ಷಿಣೆಯ ಸ್ವರೂಪಿಯೇ ಮುಮುಕ್ಷುಗಳಿಗೆ ಪ್ರಿಯವಾದ ದಕ್ಷಿಣಾಮೂರ್ತಿಸ್ವರೂಪಿಯೇ ಭಕ್ತರಿಗೆ ದಾಕ್ಷಿಣ್ಯ ಯುಕ್ತನಾಗಿಯೂ ಆನಂದದಾಯಕನಾಗಿಯೂ ಇರುವವನೇ **ರಾಜ್ಞಾ ವಿಶಂ ದಾಧಾರ** ರಾಜರಿಗೆ ಪ್ರಜಾಪಾಲಕತ್ವ ಪ್ರೇರಣೆಯನ್ನು ನೀಡಿ ಸಮಸ್ತ ಪ್ರಜೆಗಳನ್ನೂ ಪಾಲಿಸಿ ರಕ್ಷಿಸುತ್ತಿರುವವನೇ.

**ವೃಷಭಃ** ಭಕ್ತರ ಇಷ್ಟಾರ್ಥಗಳನ್ನು ಈಡೇರಿಸುತ್ತಿರುವವನೇ **ತ್ವಷ್ಟಾ** ವ್ಯಾಪಕ ವಾಗಿರುವ ದುಷ್ಟರನ್ನು ಶಿಕ್ಷಿಸಿ ನಿಗ್ರಹಿಸುವವನೇ **ವೃತ್ರೇಣ ಶಚೀಪತಿಃ** ವೃತ್ರಸಂಹಾರ ನಿಮಿತ್ತವಾಗಿ ಪಶುಪತಿಪದದಂತೆ ಕರ್ಮವಾಚಕವಾಗಿ ಶಿಕ್ಷಾ ಶಚೀನಾಂಪತೇ ಎಂದು ಪ್ರಸಿದ್ಧವಾಗಿರುವ ವೃತ್ರಹಂತಕನಾದ ಇನ್ದ್ರರೂಪೀ ಪಾಲಕನೇ **ಅನ್ನೇನ ಗಯಃ** ಯಜ್ಞ ಯಾಗ ದಾನಾದಿಗಳಲ್ಲಿ ನಿರತನಾದ ಬಹ್ವನ್ನಸಂಪನ್ನನಾದ ಗೃಹಸ್ಥನ ರೂಪದಲ್ಲಿರು ವವನೇ **ಪೃಥಿವ್ಯಾ ಸೃಣೀಕಃ** ಶಿಷ್ಟಪಾಲಕ ದುಷ್ಟಶಿಕ್ಷಕನಾಗಿ ಪೃಥ್ವಿಯ ಸಕಲವನ್ನೂ ಸೃಣಿ ಅಂದರೆ ಅಂಕುಶವು ಆನೆಯನ್ನೂನಿಯನ್ತ್ರಿಸುವಂತೆ ಅಂಕುಶಸ್ಥಾನೀಯನಾದ ಪರಮೇಶ್ವರನೇ ಅವರವರ ಕರ್ಮಗತ ಅಂಕುಶಧರ್ಮದಿಂದ ನಿಯನ್ತ್ರಿಸುತ್ತಿರುವವನೇ **ಅಗ್ನಿನಾ ವಿಶ್ವಂ ಭೂತಮಭ್ಯಭವಃ** ಯಜ್ಞದಲ್ಲಿ ಅರ್ಪಿಸುವ ಪುರೋಡಾಶಾದಿ ಹವಿಸ್ಸುಗಳನ್ನು ಒಯ್ಯುವ ಅಗ್ನಿಗೆ ದೇವತೆಗಳನ್ನೂ ಅಗ್ನಿಯಿಂದಲೇ ಪಾಕಾದಿಗಳನ್ನು ನೆರವೇರಿಸುವ ಮನುಷ್ಯರನ್ನೂ ಅಧೀನ ಮಾಡಿ ಪ್ರಳಯಕಾಲದಲ್ಲಿ ಲಲಾಟಾಗ್ನಿಯಿಂದ ಎಲ್ಲವನ್ನೂ ದಹಿಸಿ ಉಪಸಂಹರಿಸುತ್ತಿರುವವನೇ **ವಾಯುನಾ ವಿಶ್ವಾಃ ಪ್ರಜಾ ಆಭ್ಯಪವಥಾಃ** ಪ್ರಾಣಾನುಗ್ರಹಕವಾದ ವಾಯುವಿನಿಂದ ಪ್ರಜೆಗಳನ್ನು ಪವಿತ್ರರನ್ನಾಗಿ ಮಾಡುತ್ತಿರುವವನೇ **ವಷಟ್ಕಾರೇಣಾರ್ಧಭಾಕ್** ವಷಟ್ಕಾರ ಸ್ವಾಹಾಕಾರ ಸ್ವಧಾಕಾರ ನಮಸ್ಕಾರಗಳಿಂದ ಅಭಿಲಕ್ಷಿತವಾದ ದೇವಯಜ್ಞ ಪಿತೃಯಜ್ಞ ದೇವಪೂಜಾವ್ರತಾದಿಗಳ ಫಲಗಳನ್ನು ಕರ್ತೃಅನುಭವಿಸುವಂತೆ ಮಾಡುವವನೇ ಯಜ್ಞಕರ್ತೃವಾದ ಯಜಮಾನನ ಅರ್ಧ ಅಂದರೆ ಸಮೀಪವಾಚಕನಾಗಿರುವವನೇ **ಸೋಮೇನ ಸೋಮಪಾಃ** ಸೋಮಯಾಗ ಅನುಷ್ಠಾನದಿಂದ ಚನ್ದ್ರಮಂಡಲಾರೂಢರಾಗುವಂತೆ ಮಾಡುವವನೇ ಸರ್ವದೇವಾತ್ಮ ಕತ್ವವನ್ನುಂಟು ಮಾಡುವವನೇ **ಸಮಿತ್ಯಾ ಪರಮೇಷ್ಠೀ** ಬ್ರಹ್ಮಸಭಾ ಉಪಲಕ್ಷಿತವಾದ ಹಿರಣ್ಯಗರ್ಭನೇ ಗೃಹಸ್ಥಾಶ್ರಮ ವಿಹಿತ ಕರ್ಮಾನುಷ್ಠಾನ ನಿರತನೇ ಪಾರ್ವತೀಪರಮೇಶ್ವರರೇ.

ಹೀಗೆ ನಾನಾ ಮಹಿಮಾ ವಿಶಿಷ್ಟನಾದ ಸರ್ವಾತ್ಮಕನಾದ ಭಗವಂತನನ್ನು ವರ್ಣಿಸಿ ನಮಸ್ಕರಿಸಿ ಅವನ ಅಂಶರೂಪವಾದ ರುದ್ರರೂಪಗಳನ್ನು **ಯೇದೇವಾ ದೇವಾಃ** ಎಂಬ ಆರು ಮನ್ತ್ರಗಳಿಂದ ವರ್ಣಿಸಿ ನಮಸ್ಕರಿಸುತ್ತಾ ಪ್ರಸಾದಾನುಗ್ರಹಕ್ಕಾಗಿ

ಪ್ರಾರ್ಥಿಸಲಾಗಿದೆ. ಭೇರೀ ಶಂಖ ಮೃದಂಗಾದಿ ಬಗೆಬಗೆಯವಾದ್ಯಗಳನ್ನು ನುಡಿಸುತ್ತಾ ನೃತ್ಯ ಮಾಡುತ್ತಾ ತಾವೂ ಆನಂದಪರವಶರಾಗಿ ಇತರರನ್ನೂ ಆನಂದಗೊಳಿಸುತ್ತಾ ಸ್ವರ್ಗಾದಿಲೋಕಗಳಲ್ಲಿ ಕ್ರೀಡಿಸುತ್ತಿರುವವರು **ದಿವಿಷದಃ**. ಅನ್ತರಿಕ್ಷಾದಿ ಲೋಕಗಳಲ್ಲಿ ಕ್ರೀಡಿಸುತ್ತಿರುವವರು **ಅನ್ತರಿಕ್ಷಸದಃ**. ಪೃಥಿವ್ಯಾದಿ ಸಮಸ್ತಲೋಕಗಳಲ್ಲಿ ಕ್ರೀಡಿಸುತ್ತಿರುವವರು **ಪೃಥಿವೀಷದಃ**. ವರುಣಸಂಬಂಧಿ ಸಮುದ್ರ ನದೀ ತಟಾಕಾದಿ ಜಲಾಶಯಗಳಲ್ಲಿ ಕ್ರೀಡಿಸುತ್ತಿರುವವರು **ಅಪ್ಸುಷದಃ**. ಪೂರ್ವಾದಿ ದಿಗ್ದೇಶಗಳಲ್ಲಿ ಕ್ರೀಡಿಸುತ್ತಿರುವವರು **ದಿಕ್ಷುಸದಃ**. ಆಗ್ನೇಯಾದಿ ಅವಾಂತರ ದಿಶಾದೇಶಗಳಲ್ಲಿ ಕ್ರೀಡಿಸುತ್ತಿರುವವರು **ಆಶಾಸದಃ**. ಇವರು ಸಾಮಾನ್ಯರಲ್ಲ ದೇವರಿಗಳಿಗೂ ದೇವರುಗಳು – **ಯೇ ದೇವಾ ದೇವಾಃ**.

**ಅವಜ್ಯಾಮಿವ ಧನ್ವನೋ ವಿತೇ ಮನ್ಯುನ್ನಯಾಮಸಿ** ಶ್ರುತಿಸ್ಮೃತಿ ವಿಹಿತ ಕಾರ್ಯಮಾಡದವರನ್ನೂ ನಿಷಿದ್ಧಕರ್ಮಗಳನ್ನಾಚರಿಸುವವರನ್ನೂ ಸಂಹರಿಸಲು ಧನುಸ್ಸಿನಲ್ಲಿ ಬಾಣಹೂಡಿ ಸಜ್ಜಾಗಿರುವ ಶಿವನ ಕೋಪವನ್ನು ಭಕ್ತಿಯಿಂದ ಸ್ತುತಿಸಿ ನಮಸ್ಕರಿಸಿ ಹೋಗಲಾಡಿಸುತ್ತೇವೆ. ಮನ್ಯುರ್ಮನ್ಯತೇದೀಪ್ತಿ ಕರ್ಮಣಃ ನಿರು. ೧೦–೩೦ ಕ್ರೋಧದಿಂದ ಉದಯವಾಗುವ ಭಯದಿಂದ ಅಥವಾ ಮನನ ಸಾಧನಗಳ ತೇಜಸ್ಸಿನಿಂದ ಉದಯವಾಗುವ ಮನನೀಯ ವಚನಗಳಿಂದ ಗೌರವಾದರಗಳಿಂದ ಹೃತ್ಪೂರ್ವಕವಾಗಿ ನಮಿಸತ್ತೇವೆ ಸ್ತುತಿಸುತ್ತೇವೆ. ಮನ್ಯವೇ ಮನನ್ಯರ್ಮನನ ಸಾಧನಂ ಸ್ತೋತ್ರಮ್ ॥ ಸಾ.ಋ. ೧೭೭ ಸಾ.ಭಾ ॥ **ಮೃಡತಾನ್ನ ಇಹ ಅಸ್ಮಭ್ಯಂ ಇಡಾಭಾ** ಹೀಗೆ ಪ್ರಸನ್ನನಾಗಿರುವ ಭಗವಂತನನ್ನು ಪಶುಸಂಪತ್ತನ್ನೂ ಅನ್ನಸಂಕೇತವಾದ ಭೋಗೈಶ್ವರ್ಯಗಳನ್ನೂ ಸುಖಶಾಂತಿಯನ್ನೂ ಅನುಗ್ರಹಿಸಬೇಕೆಂದು ಪ್ರಾರ್ಥಿಸುತ್ತೇವೆ. **ವಿಶ್ವಂ ಭೂತಮ್ ಯುಯೋ ನಮಃ** ಸಮಸ್ತ ಚರಾಚರ ಜಗತ್ತಿನ ಸೃಷ್ಟಿಕರ್ತನೂ ಸರ್ವಶಕ್ತನೂ ಸರ್ವಫಲದಾತೃವೂ ಆದ ಭಗವಂತನಿಗೆ ನಮಸ್ಕರಿಸುತ್ತೇವೆ.

೧೨೦ ೩ ೧೨ ೩ ೧೨ ೩ ೧೨೦ ೩ ೧೨೦ ೩ ೧೨೦
ನಮಃ–ಉತ್ತತಿಭ್ಯಃ–ಉತ್–ತತಿಭ್ಯಃ–ಚ–ಉತ್ತನ್ವಾನೇಭ್ಯಃ–ಉತ್–ತನ್ವಾನೇಭ್ಯಃ–ಚ–ನಮಃ–
೩ ೧೨ ೩ ೧೨ ೩ ೧೨ ೩ ೧೨ ೩ ೧೨೦ ೧೨೦ ೩
ನಿಷಂಗಿಭ್ಯಃ–ನಿ–ಸಂಗಿಭ್ಯಃ–ಚ–ಉಪವೀತಿಭ್ಯಃ–ಉಪ–ವೀತಿಭ್ಯಃ–ಚ–ನಮಃ–ಅಸ್ಯದ್ಭ್ಯಃ–ಚ
೧೨೦ ೩ ೧೨೦ ೩ ೧೨೦ ೩ ೧೨ ೩ ೧೨ ೩
–ಪ್ರತಿದಧಾನೇಭ್ಯಃ–ಪ್ರತಿ–ದಧಾನೇಭ್ಯಃ–ಚ–ನಮಃ –ಪ್ರವಿಧ್ಯದ್ಭ್ಯಃ –ಚ–ಪ್ರವ್ಯಾಧಿಭ್ಯಃ–ಪ್ರ–
೧೨ ೩ ೧೨೦ ೧೨೦ ೩ ೧೨ ೩ ೧೨೦ ೩ ೧೨ ೩ ೧೨೦ ೩
ವ್ಯಾಧಿಭ್ಯಃ–ಚ–ನಮಃ–ತ್ಸರದ್ಭ್ಯಃ–ಚ–ತ್ಸಾರಿಭ್ಯಃ–ಚ–ನಮಃ–ಶ್ರಿತೇಭ್ಯಃ–ಚ–ಶ್ರಾಯಿಭ್ಯಃ–ಚ–
೧೨೦ ೧೨೦ ೩ ೧೨ ೩ ೧೨೦ ೩ ೧೨೦ ೩ ೨ ೩ ೨
ನಮಃ–ತಿಷ್ಠದ್ಭ್ಯಃ–ಚ–ಉಪತಿಷ್ಠದ್ಭ್ಯಃ–ಉಪ–ತಿಷ್ಠದ್ಭ್ಯಃ–ಚ–ನಮಃ–ಯತೇ–ಚ–ವಿಯತೇ
೩ ೨ ೩ ೧೨೦ ೩ ೨ ೩ ೧೨೦ ೩
–ವಿ–ಯತೇ–ಚ–ನಮಃ–ಪಥೇ–ಚ–ವಿಪಥಾಯ–ವಿ–ಪಥಾಯ –ಚ ॥ ಅರ. ೨೧೩ ॥

೧ ೨ ೧ ೨ ೧ ೨ ೧ ೨
**೨. ಅಧಿಪ । ತಾಇ । ಮಿತ್ರಪ । ತಾಇ । ಕ್ಷತ್ರಪ । ತಾಇ । ಸ್ವಃಪ**

೧ ೨ — — ೧ ೨ ೧ ೨೦
ತಾಇ । ಧನಪತಾಽ೨ಇ । ನಾಽ೨ಮಾಃ ॥ ನಮಉತ್ತತಿಭ್ಯಶ್ಚೋತ್ತ
೦ ೧೦ ೨೧೦ ೨೦ ೧ ೨೦ ೦ ೧ ೨೧೦ ೨
ನ್ವಾನೇಭ್ಯಶ್ಚನಮೋನೀಷಂಗಿಭ್ಯಶ್ಚೋಪವೀತಿಭ್ಯಶ್ಚನಮೋಸ್ಯದ್ಭ್ಯಶ್ಚಪ್ರ ।
೧ ೦ ೨೦ ೧ ೨೧ ೨ ೦ ೧ ೨೧೨ ೧ ೨
ತಿದಧಾನೇಭ್ಯಶ್ಚನಮಃಪ್ರವಿಧ್ಯದ್ಭ್ಯಶ್ಚಪ್ರವ್ಯಾಧಿಭ್ಯಶ್ಚನಮಃ ಸ್ಥಿಃ ತ್ಸರದ್ಭ್ಯ
೦ ೧ ೨೧ ೨ ೧೦ ೨೦ ೧ ೨೧೨೧ ೨ ೦ ೧
ಶ್ಚತ್ಸಾರಿಭ್ಯಶ್ಚನಮಃಶ್ರಿ । ತೇಭ್ಯಶ್ಚಶ್ರಾಯಿಭ್ಯಶ್ಚನಮಸ್ತಿಷ್ಠದ್ಭ್ಯಶ್ಚೋಪತಿಷ್ಠ
೨ ೧೦ ೨ ೧೦ ೨ ೧೦೨೧ ೨೧೦೨೧ ೨೦
ದ್ಭ್ಯಶ್ಚನಮೋಯತೇಚವಿಯತೇಚನಮಃಪಥೇಚವಿಪಥಾಯಚ ।
೧೨೧೦ ೨೧ ೨೦ ೧೦೨೧ ೨೦ ೧೦೨ ೧
ಅವಜ್ಯಾಮಿವಧನ್ವನೋವಿತೇಮನ್ಯುನ್ನಯಾಮಸಿಮೃಡತಾನ್ನಇಹ ॥
೨೧೨ ೧ ೨ ೧ ೦ ೨
ಅಸ್ಮಭ್ಯಮ್ । ಇಡಾಽ೨ಇಭಾ ॥ ಯಇದಂವಿಶ್ವಂಭೂತಮ್ । ಯು
೧ ೫
ಯೋಽಇಆಉ । ವಾಽ೨ಇ ॥ ನಾಽ೨ಇಮಾಃ ॥

*ದೀ - ೨೬ । ಪ - ೧೯ । ಮಾ - ೧೫ । ಘು ॥ ೭.೨೧೩ ॥*

ಸ್ತೋಭ ಭಾಷ್ಯ - ಉತ್ತತಿಭ್ಯಃ ಊರ್ಧ್ವಾ-ಸ್ವಭಾವತ ಏವ ತತಿಸ್ತತನಂ ಯೇಷಾಂ ತೇ ಉತ್ತತಯಃ । ಬುದ್ಧಿಪೂರ್ವಮುತ್ತತನಂ ಪ್ರಾಣಿನಾಂ ಯೇ ಕುರ್ವನ್ತಿ ತೇ ಉತ್ತನ್ವಾನಾಃ ನಿಷಂಗಃ ಅವಾಪಃ ಯೇಷಾಂ ತೇ ನಿಷಂಗಿಣಃ ಸಂಗ್ರಾಮಾರ್ಥಂ ಗಲೇ ಯೇ ವಾಸಾಂಸಿ ಸಂಬಧ್ನನ್ತಿ ತೇ ಉಪವೀತಿನಃ ಶರಾನಸ್ಯನ್ತಿ - ಕ್ಷಿಪನ್ತೀತಿ ಅಸ್ಯನ್ತಃ । ಪ್ರತಿದಧತ್ಯನ್ಯಪ್ರಾಣಿನೋ ಯೇ ನಿವಾರಯನ್ತಿ ತೇ ಪ್ರತಿದಧಾನಾಃ । ಪ್ರಕರ್ಷೇಣ ಕರ್ಮಾಣಿ ವಿಧ್ಯನ್ತಿ ತಾಡಯನ್ತೀತಿ ಪ್ರವಿಧ್ಯನ್ತಃ । ಪ್ರವ್ಯಾಧಃ ಯೇಷಾ ಮಸ್ತೀತಿ ಪ್ರವ್ಯಾಧಿನಃ ತ ಏವ ಛದ್ಮನಾ ಚರನ್ತಃ ತ್ಸರನ್ತಃ ಛದ್ಮಯೇಷಾಮಸ್ತೀತಿ ತೇ ತ್ಸಾರಿಣಃ । ಶ್ರಿತಾಃ ಅನ್ಯಸ್ಯ ಸಂಬದ್ಧಾಃ । ಶ್ರಾಯಃ ಅನ್ಯೈಃ ಸಮಾಶ್ರಯಣಂ ಏಷಾಂ ತೇ ಶ್ರಾಯಿಣಃ । ಸ್ವಾತ್ಮನೇ ಸ್ಥಿತಿಂ ಕುರ್ವಾಣಾಃ ತಿಷ್ಠನ್ತಃ । ಪರೇಣ ಸಂಬಧ್ಯಮಾನಾಃ ಉಪತಿಷ್ಠನ್ತಃ । ಯಚ್ಛತಿ ನಿಯಮೇ ನಾಸ್ತಿ ಇತಿ ಯತ್ । ವಿಗತನಿಯಮಃ ವಿಯತ್ ಮಾರ್ಗೇಸ್ಥಿತಃ ಪಥಃ ಪನ್ಥಾಃ ಅಮಾರ್ಗೇಣ ಸ್ಥಿತಃ ವಿಪಥಃ । ಸರ್ವ ಪ್ರಕಾರಸ್ಯ ಪ್ರಾಣಿನಃ ಅಧಿಷ್ಠಾತಾ ಪರಮೇಶ್ವರ ಇತ್ಯರ್ಥಃ । ಅ ರ ಸಾ ೨೧೩ ॥

ಈ ಹಿಂದಿನ ೨೧೨ನೆಯ ಗಾನದಲ್ಲಿ ಅಧಿಪತೇ ಇತ್ಯಾದಿ ಪದಗಳಿಗಿರುವ ಅರ್ಥವೇ ಈ ೨೧೩ ಮತ್ತು ಮುಂದಿನ ೨೧೪ನೆಯ ಗಾನಗಳಲ್ಲಿರುವ ಇದೇ ಪದಗಳಿಗೆ ಅನ್ವಯವಾಗಿದೆ. ಇವುಗಳಲ್ಲಿ ಬರುವ ಬಹುವಚನಾನ್ತಪದಗಳು ರುದ್ರಗಣ ಪರವಾಗಿಯೂ ಏಕವಚನಾನ್ತಪದಗಳು ಶಿವನ - ಭಗವಂತನ ಪರವಾಗಿಯೂ ಇವೆ. **ನಮ ಉತ್ತತಿಭ್ಯಶ್ಚ**

**ಉತ್ತನ್ವಾನೇಭ್ಯಶ್ಚ** ಶಿರಸ್ಸಿನಲ್ಲಿ ರುಮಾಲು ಕಿರೀಟದಲ್ಲಿ ಉಷ್ಣೀಷಧರಿಸಿರುವ ಹಾಗೂ ಧನುಸ್ಸಿನಲ್ಲಿ ಮೌರ್ವಿಯನ್ನು ಕಟ್ಟಿರುವ ರುದ್ರಗಣಗಳಿಗೆ ನಮಸ್ಕಾರ. **ನಮೋ ನಿಷಂಗಿಭ್ಯಶ್ಚ ಉಪವೀತಿಭ್ಯಶ್ಚ** ತೂಣೀರಧರರೂ ಉಪವೀತಿಧರರೂ ಆದ ಕ್ಷತ್ರಿಯರಿಗೂ ಬ್ರಾಹ್ಮಣರಿಗೂ ನಮಸ್ಕಾರ. **ನಮೋಽಸ್ಯದ್ಭ್ಯಃ ಪ್ರತಿದಧಾನೇಭ್ಯಃ** ಶರಸ್ಸಂಧಾನ ಪ್ರತಿಸಂಧಾನಗಳಲ್ಲಿ ತೊಡಗಿರುವ ರುದ್ರಗಣಗಳಿಗೆ ನಮಸ್ಕಾರ. **ನಮಃ ಪ್ರವಿಧ್ಯದ್ಭ್ಯಃ ಪ್ರವ್ಯಾಧಿಭ್ಯಃ** ವಿಶಿಷ್ಟಲಕ್ಷ್ಯಗಳಲ್ಲಿ ಬಾಣ ಪ್ರಯೋಗಿಸುವವರೂ ವಿಶಿಷ್ಟ ಆಯುಧಗಳನ್ನು ಪ್ರಯೋಗಿಸುವವರೂ ಅಂದರೆ ಕರ್ತೃಕರಣ ಸಾಮರ್ಥ್ಯವುಳ್ಳವರೂ ಆಯುಧಗಳನ್ನು ಪ್ರಯೋಗಿಸದೆಯೂ ದುಷ್ಟನಿಗ್ರಹಮಾಡಿ ಜಯಶಾಲಿಗಳಾಗುವವರೂ ಆದ ಶಿವಗಣಗಳಿಗೆ ನಮಸ್ಕಾರ. **ನಮಃ ತ್ಸರದ್ಭ್ಯಶ್ಚ ತ್ಸಾರಿಭ್ಯಶ್ಚ** ಛದ್ಮವೇಷದಾರಿಗಳಾಗಿ ನಿಗೂಢವಾಗಿ ಸಂಚರಿಸುವ ರುದ್ರಗಣಗಳಿಗೆ ನಮಸ್ಕಾರ. ಹೀಗೆ ಐದು ಯಜುಸ್ಸುಗಳಿಂದ ನಿಗ್ರಹಮಾಡುವ ರುದ್ರಗಣಗಳಿಗೆ ನಮಸ್ಕರಿಸಿ ಮುಂದೆ ಶಿಷ್ಟಾನುಗ್ರಹಮಾಡುವವರನ್ನು ನಮಸ್ಕರಿಸಲಾಗಿದೆ.

**ಶ್ರಿತೇಭ್ಯಶ್ಚ ಶ್ರಾಯಿಭ್ಯಶ್ಚ** ಭಗವತ್ಸೇವಾನಿರತರೂ ಸಾಮಗಾನಶ್ರವಣಮಾಡಿಸುವವರೂ ಭಕ್ತರಿಗೆ ಆಶ್ರಯವನ್ನು ನೀಡುವವರೂ **ನಮಸ್ತಿಷ್ಠದ್ಭ್ಯಶ್ಚ ಉಪತಿಷ್ಠದ್ಭ್ಯಶ್ಚ** ಆತ್ಮಾನುಸಂಧಾನಪರರೂ ಭಗವದುಪಾಸನಾನಿರತರೂ ಆದ ರುದ್ರಗಣಗಳಿಗೆ ನಮಸ್ಕಾರ. ಇನ್ನು ಮುಂದಿನ ಮನ್ತ್ರಗಳಿಂದ ಸಾಕ್ಷಾತ್ ಭಗವಂತನನ್ನೇ ನೇರವಾಗಿ ನಮಸ್ಕರಿಸಲಾಗಿದೆ. **ನಮೋ ಯತೇ ಚ ವಿಯತೇ ಚ** ನಿಯಾಮಕತ್ವಾದಿಗಳಲ್ಲಿ ತೊಡಗಿರುವ ಯಮಾದಿನಿಯಂತ್ರಕರನ್ನೂ ನಿಯಂತ್ರಿಸುವ ಸ್ಥಾವರ ಜಂಗಮ ಖಚರರಲ್ಲೂ ಸಂಚರಿಸುವ **ನಮಃ ಪಥೇ ಚ ವಿಪಥಾಯ ಚ** ಸನ್ಮಾರ್ಗ ದುರ್ಮಾರ್ಗಗಳಲ್ಲಿ ಪ್ರವರ್ತಿಸುವವರಿಗೆ ಅಧಿಷ್ಠಾತೃವೂ ಸರ್ವ ಸೃಷ್ಟಿಕರ್ತನೂ ಸಕಲವಿಧ ಶ್ರೇಯಸ್ಸನ್ನೂ ನೀಡುವ ವೇದಮಾರ್ಗಪ್ರವರ್ತಕನೂ ಈ ಮಾರ್ಗವನ್ನು ಕ್ರಮಿಸಲಾರದವರ ಶ್ರೇಯಃ ಪ್ರಾಪ್ತಿಗಾಗಿ ಪಾಶುಪತ ಪಾಂಚರಾತ್ರಾದಿ ತನ್ತ್ರಮಾರ್ಗಪ್ರವರ್ತಕನೂ ಆಗಿರುವ ಕೂರ್ಮಪುರಾಣ ಭಗವಂತನನ್ನು ಭಕ್ತಿಯಿಂದ ನಮಸ್ಕರಿಸುತ್ತೇವೆ । ಸಾಮ ೨೧೩ ॥

೧೨೦ ೧೨೦ ೧೨೦ ೧೨೦ ೧೨೦ ೩ ೧ ೨ ೩ ೧ ೨
ನಮಃ–ಅನ್ನಾಯ–ನಮಃ–ಅನ್ನಪತಯೇ–ಅನ್ನ–ಪತಯೇ–ಏಕಾಕ್ಷಾಯ–ಏಕ–ಅಕ್ಷಾಯ–
೩ ೧ ೨ ೩ ೧ ೨ ೩ ೧೨೦ ೧೨೦ ೩ ೧ ೨ ೩ ೧ ೨ ೩
ಚ–ಅವಪನ್ನಾದಾಯ–ಅವ–ಪನ್ನಾದಾಯ–ಚ–ನಮಃ–ನಮಃ–ರುದ್ರಾಯ–ತೀರಸದೇ–ತ್ರೀ
೧೨೦ ೧೨೦ ೩ ೧ ೨ ೩ ೧ ೨ ೩ ೨ ೩ ೧೨೦ ೧೨೦ ೧೨೦ ೩
ರ–ಸದೇ–ನಮಃ–ಸ್ಥಿರಾಯ–ಸ್ಥಿರಧನ್ವನೇ–ಸ್ಥಿರ–ಧನ್ವನೇ–ನಮಃ–ಪ್ರತಿ ಪದಾಯ–ಪ್ರತಿ –ಪ
೩ ೧ ೨ ೩ ೧೨೦ ೨ ೩ ೧ ೨ ೩
ದಾಯ–ಚ–ಪಟರಿಣೇ–ಚ–ನಮಃ –ತ್ರ್ಯಮ್ಬಕಾಯ–ತ್ರಿ–ಅಮ್ಬಕಾಯ –ಚ–ಕಪರ್ದಿನೇ–ಚ
೧೨೦ ೩ ೧ ೨ ೩ ೧ ೨೦ ೩ ೧ ೨ ೩ ೧೨೦ ೩ ೧
–ನಮಃ–ಆಶ್ರಾಯೇಭ್ಯಃ–ಚ–ಪ್ರತ್ಯಾಶ್ರಾಯೇಭ್ಯಃ–ಪ್ರತಿ–ಆಶ್ರಾಯೇಭ್ಯಃ –ಚ–ನಮಃ–ಕ್ರವ್ಯೇ

೨ ೩ ೧ ೨ ೩ ೧ ೨ ೩ ೧೨೦ ೩ ೧ ೨ ೩ ೧೨೦ ೩ ೧ ೨
ಭ್ಯಃ–ಚ–ವಿರಿಮ್ಫೇಭ್ಯಃ–ವಿ–ರಿಮ್ಫೇಭ್ಯಃ–ಚ–ನಮಃ – ಸಂವೃತೇ–ಸಂ–ವೃತೇ–ಚ–ವಿವೃತೇ–
೩ ೧೨೦ ೩
ವಿ–ವೃತೇ–ಚ । ಅರ ಸಾ ೨೧೪ ॥

೩. ಅಧಿಪ । ತಾಇ । ಮಿತ್ರಪ । ತಾಇ । ಕ್ಷತ್ರಪ । ತಾಇ । ಸ್ವಃಪ ತಾಇ । ಧನಪತಾऽ೨ಇ । ನಾऽ೨ಮಾಃ ॥ ನಮೋಽನ್ನಾಯನಮೋಽನ್ನಪತಯಏಕಾಕ್ಷಾಯಚಾವಪನ್ನಾದಾಯಚನಮೋನಮಃ । ರುದ್ರಾಯತೀರಸದೇನಮಃಸ್ಥಿರಾಯಸ್ಥಿರಧನ್ವನೇನಮಃಪ್ರತಿಪದಾಯಚಪಟರಿಣೇಚನಮಸ್ತ್ರಿಯಂಬಕಾಯಚಕ । ಪರ್ದಿನೇಚನಮಆಶ್ರಾಯೇಭ್ಯಶ್ಚಪ್ರತ್ಯಾಶ್ರಾಯೇಭ್ಯಶ್ಚನಮಃಕ್ರವ್ಯೇಭ್ಯಶ್ಚವಿರಿಮ್ಫೇಭ್ಯಶ್ಚನಮಃಸಂವೃತೇಚವಿವೃತೇಚ । ಅವಜ್ಯಾಮಿವಧನ್ವನೋವಿತೇಮನ್ಯುನ್ನಯಾಮಸಿಮೃಡತಾನ್ನಇಹ ॥ ಅಸ್ಮಭ್ಯಮ್ । ಇಡಾऽ೨೩ಭಾ ॥ ಯಇದಂವಿಶ್ವಂಭೂತಮ್ । ಯುಯೋऽ೩ಆಉ । ವಾऽ೨೩ ॥ ನಾऽ೨೩೪ಮಾಃ ॥

*ದೀ – ೩೫ । ಪ – ೧೯ । ಮಾ – ೧೬ । ಭೂ ॥ ೮.೨೧೪ ॥*

ಸ್ತೋಭ ಭಾಷ್ಯ–ಅನ್ನಂ ಅನ್ನಪತಿರಿತಿ ಭೋಗ್ಯಭೋಕ್ತೃರೂಪತ್ವಂ ಭಗವತಃ । ಏಕಮಕ್ಷಂ ಮನ ಏವ ಇನ್ದ್ರಿಯಂ ವ್ಯಾಪಕಮಸ್ಯ ಮನಃ ಅಸ್ಯ ದೈವತಂ ಚಕ್ಷುರಿತಿ ಶ್ರುತೇಃ । ನತು ಅಸ್ಮದಾದಿವತ್ ಚಕ್ಷುರಾದ್ಯಪೇಕ್ಷಾ । ಪಶ್ಯತ್ಯಚಕ್ಷುಃ ಸಶ್ರುಣೋತ್ಯಕರ್ಣಃ ಇತಿ ಶ್ರವಣಾತ್ । ಅವಪನ್ನಂ ಉಪಹತಂ ಶ್ವಾದಿರೂಪೇಣ ಅತ್ತೀತಿ ಅವಪನ್ನಾದಃ । ನಮಃ ಶ್ವಭ್ಯಶ್ವಪತಿಭ್ಯಶ್ಚವೋ ನಮಃ ಇತಿ ರುದ್ರೇಷು ಶ್ರವಣಾತ್ ಸರ್ವಾತ್ಮಕಸ್ಯ ನಮಸ್ಕಾರೋ ನ ವಿರುಧ್ಯತೇ । ನದೀತೀರೇಷು ಶ್ಮಶಾನೇಷು ಸೀದತೀತಿ ತೀರಸತ್ । ಶತ್ರುನಿಗ್ರಹೇ ಪಾಲನೇ ಚ ಸ್ಥಿರಃ ದೃಢಃ । ಸ್ಥಿರಧನ್ವಾ ದೃಢಾಯುಧಃ ನ ಭೀರುಃ । ಪ್ರಾಣಿನಾಂ ಪ್ರತಿಪದಂ ಪಾದಮುದ್ರಾಸು ತಿಷ್ಠತೀತಿ ಪ್ರತಿಪದಃ । ಪಟರಂ ಪಟಲಂ ಪ್ರಾಣಿಸಮೂಹಃ ಅಸ್ಯ ಅನ್ವಾಯತತಯಾ ಅಸ್ತೀತಿ ಪಟರೀ ತ್ರೀಣಿ ಅಬಕಾನಿ ನೇತ್ರಾಣಿ ಅಸ್ಯೇತಿ ತ್ರ್ಯಂಬಕಃ । ಕಪರ್ದಃ ಜಟಾ ಕಲಾಪಃ ಅಸ್ಯಾಸ್ತೀತಿ ಕಪರ್ದೀ ಆಶ್ರಯನ್ತಿ

ದ್ವಿಷ್ಟಾನ್ ಕೇಶಾದಿಷು ಗೃಹ್ಣನ್ತೀತಿ **ಆಶ್ರಾಯಾಃ** । ಪ್ರತೀಪಂ ಅವಷ್ಟಬ್ಧಾಃ ಆಶ್ರಯನ್ತೀತಿ **ಪ್ರತ್ಯಾಶ್ರಾಯಾಃ** । ಕ್ರವ್ಯಂ ಆಮಂ ಮಾಂಸಂ ಭಕ್ಷ್ಯತ್ವೇನ ಏಷಾಂ ಭವತಿ ತೇ **ಕ್ರವ್ಯಾಃ** ಕ್ರವ್ಯಾದಾಃ ಗೃಧ್ರಾದಯಃ । ವಿಶೇಷೇಣ **ರಿಂಘಾಃ** – ಹಿಂಸಕಾಃ **ವಿರಿಂಘಾಃ** ರುದ್ರಾಃ ಕಿಂ ಬಹುನಾ ಪರಮೇಶ್ವರಸ್ಯ ಸ್ವರೂಪ ಕಥನೇನ ಅಶೇಷ ವಿಶೇಷ ಉಪಸಂಹಾರತ್ **ಸಂವೃದುಚ್ಯತೇ** । ಏಕಏವ ರುದ್ರಃ ನ ದ್ವಿತೀಯಾಯ ತಸ್ಥೇ ಇತಿ ಜಗದಾತ್ಮನಾ ಚ ಯದಾ ವ್ಯವತಿಷ್ಠತೇ ತದಾ ವಿವೃಣೋತೀತಿ **ವಿವೃತ್** । ಯಥೋಕ್ತಮಸಂಖ್ಯಾತಾಃ ಸಹಸ್ರಾಣಿ ಸಹಸ್ರಶೋ ಯೇರುದ್ರಾಃ ಅಧಿಭೂಮ್ಯಾಮಿತಿ । ಅರ.ಸಾ.೨೧೪ ॥

**ನಮೋಽನ್ನಾಯ ನಮೋಽನ್ನಪತಯೇ** ಪೃಥಿವೀ ಮತ್ತು ಪೃಥಿವೀಪತಿ ರೂಪನೂ ಭೋಕ್ತೃವೂ ಮತ್ತು ಭೋಗ್ಯರೂಪನೂ ಆಗಿರುವ ಭಗವಂತನಾದಶಿವನಿಗೆ ನಮಸ್ಕಾರ. **ಏಕಾಕ್ಷಾಯ** ಚ ಮನಸ್ಸೇ ಕಣ್ಣಾಗಿರುವ ಜ್ಞಾನವೆಂಬ ಒಂದೇ ಕಣ್ಣುಳ್ಳ ಫಾಲ ಲೋಚನನೂ **ಅವಪನ್ನಾದಾಯ ಚ** ಮರಗಳಿಂದ ಉದುರಿದ ಎಲೆಗಳನ್ನು ಅಂದರೆ ಜೀರ್ಣಪರ್ಣಭಕ್ಷಿಸುವ ಯತಿಯೂ ತಪಸ್ವಿಯೂ ಆಗಿರುವ ಸರ್ವವ್ಯಾಪಕನಾಗಿರುವ **ರುದ್ರಾಯ ತೀರಸದೇ** ಶ್ಮಶಾನ ನದೀತೀರ ಆದಿ ಕ್ಷೇತ್ರಗಳಲ್ಲಿ ವಾಸಿಸುವ ಸಂಸಾರ ಸಾಗರವನ್ನು ದಾಟಿಸುವ ಅವಿದ್ಯೆಯನ್ನು ನಿವಾರಿಸುವ ಭಗವಂತನಾದ ಶಿವನಿಗೆ ನಮಸ್ಕಾರಗಳು. **ನಮಃ ಸ್ಥಿರಾಯ ಸ್ಥಿರ ಧನ್ವನೇ** ದೃಢಾಯುಧನೂ ಶತ್ರುನಿಗ್ರಹದಲ್ಲಿ ಪರ್ವತದಂತೆ ಸ್ಥಿರನೂ ಮಹಾಮೇರುವಿನಂತೆ ದೃಢಧನುರ್ಧರನೂ ಶತ್ರು ಭಯಂಕರನೂ ಸಾರ್ವಭೌಮನೂ ಆದ ಭಗವಂತನಾದ ಶಿವನಿಗೆ ನಮಸ್ಕಾರಗಳು. **ನಮಃ ಪ್ರತಿ ಪದಾಯ ಚ ಪಟರಿಣೇ ಚ** ಸಮಸ್ತ ಜೀವಿಗಳ ಹೆಜ್ಜೆಹೆಜ್ಜೆಯಲ್ಲೂ ತನ್ನ ಅಸ್ತಿತ್ವವನ್ನೂ ಪ್ರಭಾವವನ್ನೂ ವ್ಯಕ್ತಪಡಿಸುತ್ತಿರುವ ಪ್ರತಿಯೊಬ್ಬರನ್ನೂ ಪ್ರತಿಯೊಂದನ್ನೂ ಕ್ಷಣಕ್ಷಣವೂ ಪ್ರೇರಿಸುತ್ತಿರುವ ಸರ್ವಲೋಕಾಶ್ರಿತಚರಣಾಂಬುಜನಾಗಿರುವ ಭಗವಂತನಾದ ಶಿವನಿಗೆ ನಮಸ್ಕಾರಗಳು. **ನಮಸ್ತ್ರ್ಯಂಬಕಾಯ** ಚ ಸೋಮ ಸೂರ್ಯ ಅಗ್ನಿ ಎಂಬ ಮೂರುಕಣ್ಣುಳ್ಳವನೂ ವೇದತ್ರಯಪ್ರತಿಪಾದ್ಯನೂ ಪ್ರಣವವಾಚ್ಯನೂ ಬ್ರಹ್ಮ ವಿಷ್ಣು ರುದ್ರರ ಜನಕನೂ ತ್ರ್ಯಂಬಕಮಂತ್ರದಿಂದ ಉಪಾಸ್ಯನೂ ಆಗಿರುವ **ಕಪರ್ದಿನೇ ಚ** ಜಟಾಜೂಟದಿಂದ ಗಂಗೆಗೆ ಆಶ್ರಯಕೊಟ್ಟು ಲೋಕಾನುಗ್ರಹಮಾಡಿದವನೂ ಈ ಕಪರ್ದದಿಂದ ವೀರಭದ್ರನನ್ನು ಸೃಷ್ಟಿಸಿ ದಕ್ಷಯಜ್ಞಧ್ವಂಸಮಾಡಿದವನೂ ಆದ ಭಗವಂತನಾದ ಶಿವನಿಗೆ ನಮಸ್ಕಾರಗಳು. **ನಮ ಆಶ್ರಾಯೇಭ್ಯಶ್ಚ ಪ್ರತ್ಯಾಶ್ರಾಯೇಭ್ಯಶ್ಚ** ಆಶ್ರಿತರಿಗೂ ಇಷ್ಟಪ್ರಾಪ್ತಿ ಅನಿಷ್ಟನಿವೃತ್ತಿಗಾಗಿ ಉಪಾಸನೆ ಮಾಡುವವರಿಗೂ ಸೇವಾ ಫಲವನ್ನನುಗ್ರಹಿಸುವ **ನಮಃ ಕ್ರವ್ಯೇಭ್ಯಶ್ಚ ವಿರಿಮ್ಭೇಭ್ಯಶ್ಚ** ಮಹಾಬಲಶಾಲಿಯೂ ಶತ್ರುಹಿಂಸಕನೂ ಆಗಿರುವ ಭಗವಂತನಾದ ಶಿವನಿಗೆ ರುದ್ರಗಣಗಳಿಗೆ ನಮಸ್ಕಾರ. **ನಮಃ ಸಂವೃತೇ ಚ ವಿವೃತೇ ಚ** ಭಕ್ತರಲ್ಲದವರಿಗೆ ನಿಜರೂಪ ತೋರಿಸದೆ ಯೋಗ ಮಾಯೆಯಿಂದ ತನ್ನನ್ನು ಮರೆಮಾಡಿಕೊಳ್ಳುವ ನಿಜವಾದ ಭಕ್ತರಿಗೆ ಆತ್ಮ ಪ್ರಕಾಶವಾಗಿ ನಿಜರೂಪ ತೋರಿಸುವ ಭಗವಂತನಾದ ಶಿವನಿಗೆ ರುದ್ರಗಣಗಳಿಗೆ ನಮಸ್ಕಾರ. ಹೀಗೆ ಪರಮೇಶ್ವರನಮಹಿಮಾ ಕಥನದಿಂದ ಅಶೇಷ ಉಪಸಂಹಾರ ಪೂರ್ವಕ ಸಂವೃತತ್ವವೂ ಜಗದ್ರೂಪ ಪರಿಣಾಮದಿಂದ ಸರ್ವಪ್ರಕಾಶತ್ವವೂ ವ್ಯಕ್ತವಾಗಿದೆ.

॥ ವಾಮದೇವೋ ಗೌತಮಃ ಪಙ್ಕ್ತಿಃ ಋತವಃ ಅಗ್ನಿಃ ॥

೩ ೧ ೨೦ ೩ ೧ ೨೦
**ವಸನ್ತ ಇನ್ನು ರನ್ತ್ಯೋ ಗ್ರೀಷ್ಮ ಇನ್ನು ರನ್ತ್ಯಃ ।**
೩ ೧ ೨೦ ೩ ೧ ೨ ೩ ೧ ೨೦೩ ೧ ೨೦
**ವರ್ಷಾಣ್ಯನು ಶರದೋ ಹೇಮನ್ತಃ ಶಿಶಿರ ಇನ್ನು ರನ್ತ್ಯಃ ॥೨-೬೧೬॥**

೩ ೨ ೧೨೦ ೩ ೨ ೧೨೦ ೩ ೧ ೨ ೧೨೦ ೩
**ವಸನ್ತಃ–ಇತ್–ನು–ರನ್ತ್ಯಃ । ಗ್ರೀಷ್ಮಃ–ಇತ್–ನು–ರನ್ತ್ಯಃ ॥ ವರ್ಷಾಣಿ–ಅನು–ಶ**
೧೨ ೩ ೨ ೧೨೦ ೧೨೦
**ರದಃ । ಹೇಮನ್ತಃ–ಶಿಶಿರಃ–ಇತ್–ನು–ರನ್ತ್ಯಃ ॥ ೨-೬೧೬ ॥**

॥ ಋತುಷ್ಠಾ ಯಜ್ಞಾಯಜ್ಞೀಯಮ್ । ಪ್ರಜಾಪತಿಃ ಬೃಹತೀ ಋತವಃ ॥

೩ ೪ ೨ ೪ ೫ ೧೦
**೧೨೮.೧. ವಾಽ೫ಸನ್ತಃ । ಈಽ೩ನ್ನೂಽ೩ರನ್ತಾಯಾಃ ॥ ಗ್ರೀಷ್ಮಇ**
೨ ೨ ೨ ೧೦ ೨ ೧ ೨
**ನ್ನುರಾಽ೧ನ್ತೀಽ೩ಯಾಃ । ವರ್ಷಾಣ್ಯನುಶಾಽ೩ । ಹಿಮ್ ॥ ರಾಽ೩**
೨ ೧೦ ^ ೩ ೨ ೩ ೧ ೧ ೧
**ದಾಃ ॥ ಹೇಮನ್ತಶ್ಶಿಶಿರಇನ್ನುರಾಽ೨ನ್ತಿಯಾಉ ॥ ವಾಽ೨೩೪೫ ॥**

*ದೀ – ೩ / ಪ – ೮ / ಮಾ – ೮ / ಡ್ವೈ ॥ ೯.೨೧೫ ॥*

ಸ್ತೋಭ ಭಾಷ್ಯ –ವಸನ್ತಃ ಪ್ರಜಾಪತಿಃ । ಋತುಷ್ಠಾ ಯಜ್ಞಾಯಜ್ಞೀಯಮ್ । ಬೃಹತೀ । ವಸನ್ತೋ ಗ್ರೀಷ್ಮಃ । ವರ್ಷಾನ್ಯನು ಗ್ರೀಷ್ಮಾದನನ್ತರಂ ವರ್ಷಾಃ । ಶಾರದಃ ಶರದ್ ಹೇಮನ್ತಃ ಶಿಶಿರಃ ರನ್ತ್ಯಃ ರಮಣೀಯಃ ಅಸ್ಮಾಕಂ ಸ್ವಭಾವ ಅವ್ಯಭಿಚಾರೇಣ ಪ್ರವರ್ತತಾಂ ಇತ್ಯಭಿಪ್ರಾಯಃ ॥ ಅರ ಸಾ ೨೧೫ ॥

ವಸನ್ತಾದಿ ಪ್ರತಿ ಋತುಗಳೂ ನಿಗದಿತವಾದ ತಮ್ಮ ತಮ್ಮ ಸ್ವಧರ್ಮದಿಂದ ವಿಚಲಿತಗೊಳ್ಳದೆ ತಮ್ಮ ತಮ್ಮ ಪ್ರಭಾವವನ್ನು ಬೀರುತ್ತಾ ಪ್ರಕೃತಿಯ ವೈವಿಧ್ಯತೆಗೂ ರಮಣೀಯತೆಗೂ ಉತ್ಕರ್ಷಕ್ಕೂ ನೆರವಾಗುತ್ತಿರುವಂತೆಯೇ ಮಾನವರೂ ತಮ್ಮ ತಮ್ಮ ಸ್ವಧರ್ಮಗಳಿಂದಲೂ ವಿಹಿತ ಕರ್ತವ್ಯಗಳಿಂದಲೂ ವಿಚಲಿತರಾಗದೆ ಋಜು ಮಾರ್ಗ

ದಲ್ಲಿ ಋತ ನಿಯಮಗಳನ್ನು ಪಾಲಿಸುತ್ತಾ ಜೀವನದ ಗುರಿಯನ್ನು ಮುಟ್ಟಲು ಶ್ರಮಿಸುತ್ತಿರಬೇಕು । ಅರ ಸಾ ೨೧೫ ॥

ಸಾಯಣ ಭಾಷ್ಯ - ವಸನ್ತ ಇನ್ನು ವಸನ್ತ ಏವ ಚೈತ್ರವೈಶಾಖರೂಪೋ ವಸನ್ತಋತುರೇವ ರನ್ತ್ಯಃ ರಮಣೀಯೋ ಭವತಿ । ಗ್ರೀಷ್ಮ ಇನ್ನು ಜ್ಯೇಷ್ಠಾಷಾಢ ರೂಪೋ ಗ್ರೀಷ್ಮಋತುರೇವ ರನ್ತ್ಯಃ ರಮಣೀಯಃ । **ವರ್ಷಾಣಿ** ವರ್ಷಾಃ ಶ್ರಾವಣ ಭಾದ್ರಪದರೂಪೇಣಾವಯವೀಭೂತಃ ಪ್ರಾವೃಟ್ ಋತುರೇವ ರನ್ತ್ಯಃ ರಮಣೀಯಃ । ತಾನಿ ಅನು ಶರದಃ ಆಶ್ವಿನಕಾರ್ತಿಕರೂಪೇಣಾವಯವೀಭೂತಃ ಋತುಃ ರನ್ತ್ಯಃ ರಮಣೀಯಃ । **ಹೇಮನ್ತಃ** ಮಾರ್ಗಶೀರ್ಷಪೌಷರೂಪಃ ಏವ ರನ್ತ್ಯಃ ರಮಣೀಯಃ । **ಶಿಶಿರ** ಇನ್ನು ಮಾಘಫಾಲ್ಗುನರೂಪಃ ಏವ ರನ್ತ್ಯಃ ರಮಣೀಯಃ ॥

**ವಸನ್ತಃ** ಇನ್ನು ಇನ್ನು ಇತ್+ನು ನಿಶ್ಚಯವಾಗಿಯೂ ಚೈತ್ರವೈಶಾಖವೆಂಬ ವಸನ್ತಋತುವೇ ರನ್ತ್ಯಃ ರಮಣೀಯವಾದುದು. ಗ್ರೀಷ್ಮ ಇನ್ನು ಜ್ಯೇಷ್ಠಆಷಾಢವೆಂಬ ಗ್ರೀಷ್ಮಋತುವೇ ನಿಶ್ಚಯವಾಗಿಯೂ ರನ್ತ್ಯಃ ರಮಣೀಯವಾದುದು **ವರ್ಷಾಣಿ ಅನು ಶರದಃ** ಶ್ರಾವಣಭಾದ್ರಪದವೆಂಬ ವರ್ಷಋತುವಿನ ಅನಂತರ ಬರುವ ಆಶ್ವಯುಜ ಕಾರ್ತಿಕ ವೆಂಬ ಶರದ್‌ಋತು **ಹೇಮನ್ತಃ** ಮಾರ್ಗಶಿರಪುಷ್ಯವೆಂಬ ಹೇಮನ್ತಋತು ಮತ್ತು **ಶಿಶಿರಃ** ಇನ್ನು ಮಾಘಫಾಲ್ಗುಣವೆಂಬ ಶಿಶಿರಋತುವೇ ನಿಶ್ಚಯವಾಗಿಯೂ ರನ್ತ್ಯಃ ರಮಣೀಯವಾದುದು. ಚೈತ್ರವೈಶಾಖ ಮಾಸಗಳಿಂದೊಡಗೂಡಿದ ವಸನ್ತ ಋತುವೇ ನಿಶ್ಚಯವಾಗಿಯೂ ರಮಣೀಯವಾದುದು. ಗ್ರೀಷ್ಮ ಎಂದರೆ ಜ್ಯೇಷ್ಠಆಷಾಢ ಮಾಸಗಳಿಂದೊಡಗೂಡಿದ ಗ್ರೀಷ್ಮಋತುವೇ ನಿಶ್ಚಯವಾಗಿಯೂ ರಮಣೀಯವಾದುದು. ಶ್ರಾವಣಭಾದ್ರಪದ ಮಾಸಗಳಿಂದೊಡಗೂಡಿದ ವರ್ಷ ಋತುವೇ ರಮಣೀಯವಾದುದು. ಇದನ್ನು ಅನುಸರಿಸಿ ಬರುವ ಆಶ್ವಯುಜಕಾರ್ತಿಕ ಮಾಸಗಳಿಂದೊಡಗೂಡಿದ ಶರದೃತುವೇ ರಮಣೀಯವಾದುದು. ಮಾರ್ಗಶಿರ ಪುಷ್ಯ ಮಾಸಗಳಿಂದೊಡಗೂಡಿದ ಹೇಮನ್ತಋತುವೇ ರಮಣೀಯವಾದುದು. ಮಾಘ ಫಾಲ್ಗುಣ ಮಾಸಗಳಿಂದೊಡಗೂಡಿದ ಶಿಶಿರಋತುವೇ ರಮಣೀಯವಾದುದು. ಹೀಗೆ ಒಂದು ವರ್ಷದಲ್ಲಿನ ಎಲ್ಲಾ ಕಾಲವೂ ರಮಣೀಯವಾದುದೇ ಆಗಿದೆ ಎಂದು ಈ ಮನ್ತ್ರವು ಕಾಲಪುರುಷನನ್ನು ಹೊಗಳಿದೆ. ಅರ್ಥ ಪುಷ್ಟಿಗಾಗಿ ಹೆಚ್ಚಿನ ವಿವರಗಳನ್ನು ನಿರು ೪-೨೭ರಲ್ಲಿ ಕಾಣಬಹುದು.

ಈ ಮನ್ತ್ರಕ್ಕೆ ಹೀಗೂ ಅರ್ಥ ಮಾಡಬಹುದಾಗಿದೆ. ಪ್ರಕಾಶಸ್ವರೂಪಿಯಾದ ಭಗವಂತನೇ **ವಸನ್ತಃ** ನನ್ನ ಪ್ರಾಣವು-ಪ್ರಾಣ ಏವ ವಸನ್ತಃ ಜೈ೨-೫೧ ॥ **ಇತ್ ನು** ಪುನಃ ಪುನಃ ಶೀಘ್ರಾತಿಶೀಘ್ರವಾಗಿ ರನ್ತ್ಯಃ ಪ್ರಾಣಾಯಾಮದ ಮೂಲಕ ಪ್ರಾಣಕ್ಕೆ ಪ್ರಾಣನಾದ ನಿನ್ನೊಂದಿಗೆ ರಮಿಸಿ ನಿನ್ನ ಆಶ್ರಯಪಡೆದು ಉತ್ಕರ್ಷವನ್ನು ಪಡೆಯಲಿ. **ಗ್ರೀಷ್ಮಃ** ನನ್ನ ವಾಕ್ ವಾಣಿಯು - ವಾಕ್ ಗ್ರೀಷ್ಮಃ ಜೈ ೨-೫೦ ॥ **ಇತ್ ನು** ಶೀಘ್ರಾತಿ ಶೀಘ್ರವಾಗಿ ಪುನಃ ಪುನಃ ವಾಕ್‌ಗೆ ವಾಕ್ ಆದ ನಿನ್ನೊಂದಿಗೆ **ರನ್ತ್ಯಃ** ಸ್ತುತಿಯ ಮೂಲಕ ಮಾತಿನ ಮೂಲಕ ರಮಿಸಿ ನಿನ್ನ ಆಶ್ರಯಪಡೆದು ಉತ್ಕರ್ಷ ಹೊಂದಲಿ. **ವರ್ಷಾಣಿ ಅನು** ನನ್ನ ಕಣ್ಣುಗಳು - ಚಕ್ಷುರ್ವರ್ಷಾಃ ಜೈ ೨-೫೧ ॥ ಶೀಘ್ರಾತಿ ಶೀಘ್ರವಾಗಿ ಪುನಃ

ಪುನಃ ಕಣ್ಣಿಗೆ ಕಣ್ಣಾದ ನಿನ್ನ ಈ ಸೃಷ್ಟಿಯ ಕಲೆಯ ಸೊಬಗನ್ನೂ ವೈಚಿತ್ರ್ಯವನ್ನೂ ನೋಡುತ್ತಾ ಆನಂದ ಬಾಷ್ಪದಿಂದ ನಿನ್ನೊಂದಿಗೆ ರಮಿಸಿ ನಿನ್ನ ಆಶ್ರಯಪಡೆದು ಉತ್ಕರ್ಷಹೊಂದಲಿ. **ಶರದಃ** ನನ್ನ ಕಿವಿಗಳು – ಶ್ರೋತ್ರಂ ಶರದಃ ಜೈ ೨–೫೧ । ಶೀಘ್ರಾತಿ ಶೀಘ್ರವಾಗಿ ಪುನಃ ಪುನಃ ನಿನ್ನ ಪ್ರಶಂಸೆಯ ವೈಭವದ ಸ್ತುತಿ ವಚನಗಳನ್ನು ಕೇಳುತ್ತಾ ಕಿವಿಯ ಕಿವಿಯಾದ ನಿನ್ನೊಂದಿಗೆ ರಮಿಸಿ ನಿನ್ನ ಆಶ್ರಯಪಡೆದು ಉತ್ಕರ್ಷಹೊಂದಲಿ. **ಹೇಮನ್ತಃ** ನನ್ನ ಮನಸ್ಸು – ಮನೋ ಹೇಮನ್ತಃ ಜೈ ೨–೫೧ । ಶೀಘ್ರಾತಿಶೀಘ್ರವಾಗಿ ಪುನಃ ಪುನಃ ನಿನ್ನ ಮನನ ಚಿಂತನೆಗಳ ಮೂಲಕ ಮನಸ್ಸಿಗೆ ಮನಸ್ಸಾದ ನಿನ್ನೊಂದಿಗೆ ರಮಿಸಿ ನಿನ್ನ ಆಶ್ರಯ ಪಡೆದು ಉತ್ಕರ್ಷಹೊಂದಲಿ. **ಶಿಶಿರಃ ಇತು ನು ರನ್ತ್ಯಃ** ನನ್ನ ಪ್ರತಿಷ್ಠಾನವು ಪ್ರಜ್ಞೆ ಸ್ಥೈರ್ಯಾದಿಗಳು – ಶಿಶಿರಂ ಪ್ರತಿಷ್ಠಾನಮ್ ಮೈ ೪–೯–೧೮ । ಶೀಘ್ರಾತಿ ಶೀಘ್ರವಾಗಿ ಪುನಪುನಃ ಪಾದಗಳ ಸಂಚಾರ ನಿನ್ನ ಪ್ರದಕ್ಷಿಣೆಯೆಂದು ಭಾವಿಸುತ್ತಾ ಆಸನಾದಿ ಅಷ್ಟಾಂಗಯೋಗಗಳ ಸಾಧನೆಯ ಮೂಲಕ ಪ್ರಜ್ಞೆಯ ಪ್ರಜ್ಞೆಯಾದ ನಿನ್ನೊಂದಿಗೆ ರಮಿಸಿ ನಿನ್ನ ಆಶ್ರಯ ಪಡೆದು ಉತ್ಕರ್ಷಹೊಂದಲಿ.

ಸಮಷ್ಟಿಯಾದ ವಿಶ್ವಾತ್ಮನಾದ ಕಾಲಪುರುಷನ ಅವಯವಗಳಾದ ವಸಂತಾದಿ ಋತುಗಳ ಕ್ರಿಯಾ ಕಲಾಪಗಳೊಂದಿಗೆ ವ್ಯಷ್ಟಿಯಾದ ಜೀವಾತ್ಮನಪ್ರಾಣಗಳು ಪ್ರಾಣ ಯಾಮದ ಮೂಲಕವೂ ಮನಸ್ಸು ಮನನದ ಮೂಲಕವೂ ಕಣ್ಣುಗಳು ಸೃಷ್ಟಿಯಲ್ಲಿನ ಪ್ರತಿಯೊಂದೂ ಅವನೇ ಎಂದು ಅಭ್ಯಾಸ ಮಾಡಿಕೊಳ್ಳುವ ಮೂಲಕವೂ ವಾಣಿ ಅವನ ಸ್ತುತಿ ಪ್ರಶಂಸೆಗಳ ಮೂಲಕವೂ ಕಿವಿಗಳು ಅವನ ಗುಣಗಣಗಳ ಕೀರ್ತನೆಯ ಶ್ರವಣ ಮೂಲಕವೂ ಸ್ಥೈರ್ಯ ಸಾಹಸ ಸದಾಚಾರ ಯೋಗ ಆದಿ ಸಾಧನೆಗಳ ಮೂಲಕವೂ ಬೆರೆತು ಒಂದಾಗುವ ಅಮೃತತ್ವವನ್ನು ಪಡೆಯುವ ಬಗೆಯನ್ನು ಮಾರ್ಗವನ್ನು ವಿವರಿಸಲಾಗಿದೆ. ಅರ್ಥ ಪುಷ್ಟಿಗಾಗಿ ಛಾಂ.ಉ ೫–೧೮ ಕೇನ ೧–೨ ॥ ನೋಡಬಹುದು.

*ವಸಂತಮೆಂತು ಹರ್ಷದಂ ಬಿಸಿಲ್ಗಡೆಂತು ಭಾವುಕಂ ।*
*ಸುವೃಷ್ಟಿ ಮೇಣ್ ಶರತ್‌ಸಮಂ ಹಿಮಾಂತಮೆಲ್ಲಮಿಷ್ಟದಂ ॥*

॥ ಅಜಿತಸ್ಯ ಜಿತಿಸಾಮ । ಅಜಿತೋ ಬೃಹತೀನ್ದ್ರಃ । ಪ್ರಜಾಪತಿರ್ಬೃಹತೀನ್ದ್ರೇಶಾನೌ ॥

೨೦ ೦ ೦ ೧ ೨
**೧೨೯.೧. ಹಾಉಹಾಉಹಾಉ । ಹುಪ್ । ೩ । ಬಿಬಿಬಿಬಿಬೀ೬೩ ।**

೧ ೦ ೨೦ ೦
**೩ । ಹೀ೬೨ । ೩ । ಹಾಉಹಾಉಹಾಉವಾ । ಅಭಿತ್ವಾಶೂರನೋ**

೦ ೧ ೨೦ ೦ ೧ ೦ ೦ ೦ ೨ ೧
**ನುಮೋ೬ಹಸ್ ॥ ಅದುಗ್ಧಾಇವಧೇನವೋ೬ಹಸ್ ॥ ಈಶಾನಮಸ್ಯಜ**

ಗತಸ್ವರ್ದೃಶಉ\ಹಸ್ । ಈಶಾನಮಿನ್ದ್ರತಸ್ಥುಷೋಹಸ್ । ಹಾಉಹಾ ಉಹಾಉ । ಹುಪ್ । ೩ । ಬಿಬಿಬಿಬಿಬೀಽ೩ । ೩ । ಹೀಽ೨ । ೩ । ಹಾಉಹಾಉಹಾಉವಾ ॥ ಏಅಸ್ । ಏಘಟ್ । ಏಮೃಸ್ । ಏ ಹಸ್ । ಈಽ೨೩೪೫ ॥

*ದೀ - ೨೨ । ಪ - ೩೧ । ಮಾ - ೨೮ । ಚ್ರೈ ॥ ೧೧.೨೧೬ ॥*

ಈ ೨೧೬ನೆಯ ಗಾನವು ಅಭಿ ತ್ವಾ ಶೂರನೋ ಮಮಃ ೨೩೩ನೆಯ ಋಕ್ ಮೇಲೆ ಅಧಿಷ್ಠಿತವಾಗಿದೆ.

॥ ಸೋಮ ವ್ರತಮ್ । ಸೋಮಸ್ತ್ರಿಷ್ಟುಪ್ಸೋಮಃ ॥

೧೩೦.೧. ಈಽ೨ । ೩ । ಸನ್ತೇಪಯಾ । ಸೀಽ೩ಸಮು । ಯನ್ತು ವಾಜಾಃ ॥ ಸಂವೃಷ್ಣಿಯಾ । ನೀಽ೩ಅಭಿ । ಮಾತಿಷಾಹಾಃ ॥ ಆ ಪ್ಯಾಯಮಾ । ನೋಽ೩ಅಮೃ । ತಾಯಸೋಮಾ ॥ ದಿವಿಶ್ರವಾ । ಸೀಽ೩ಉತ್ತ । ಮಾನಿಧಿಷ್ವಾ । ಈಽ೨ । ೨ । ಈಽ೨ । ಆಽ೨೩೪ ಔಹೋವಾ ॥ ಹಉ ॥

*ದೀ - ೧೧ । ಪ - ೨೦ । ಮಾ - ೬ । ಜೂ ॥ ೧೧.೨೧೭ ॥*

ಈ ೨೧೭ನೆಯ ಗಾನವು ಸನ್ತೇಪಯಾಂಸಿ ೬೦೩ನೆಯ ಋಕ್ ಮೇಲೆ ಅಧಿಷ್ಠಿತವಾಗಿದೆ.

॥ ದೀರ್ಘತಮಸೋಽರ್ಕಃ । ದೀರ್ಘತಮಾಸ್ತ್ರಿಷ್ಟುಪ್ಸೋಮಃ ಸೂರ್ಯೋವಾ ॥

೧೩೧.೧. ಆಯಾಉ । ೩ । ಅಕ್ರಾನ್ತ್ಸಮುದ್ರಃಪ್ರಥಮಾಇವಿಧರ್ಮಾ

೩ ೨ ೧ ೨೧ ೦ ೩ ೨೦ ೧

ನ್ | ವಿಧರ್ಮಾನ್ | ೨ | ಜನಯನ್ಪ್ರಜಾಭುವನಾಸ್ಯಗೋಪಾಃ |

೩ ೨೦ ೧ ೦ ೦ ೩೦ ೨ ೧ ೩೦

ಸ್ಯಗೋಪಾಃ | ೨ | ವೃಷಾಪಾವಿತ್ರೇಅಧಿಸಾನೋಅವ್ಯಾಇ | ನೋ

೨ ೧ ೨ ೧ ೦ ೦ ೦ ೦

ಅವ್ಯಾಇ | ೨ | ಆಯಾಉ | ೩ | ಬೃಹತ್ಸೋಮೋವಾವೃಧೇಸುವಾ

೩೦ ೨ ೧ ೩೦ ೨ ೧ ೨೦

ನೋಅದ್ರಾಇ | ನೋಅದ್ರಾಇ | ನೋಅದ್ರಾಽ೩೧ಉವಾಽ೨೩ ||

೨ ೨೦ ೦ ೧೦ ೧ ೧ ೧

ಏಽ೩ | ಧೇಸ್ವಾನೋಅದ್ರೀಽ೨೩೪೫ಃ ||

*ದೀ - ೨೦ | ಪ - ೨೦ | ಮಾ - ೨೮ | ಮೈ || ೧೨.೨೧೮ ||*

ಈ ೨೧೮ನೆಯ ಗಾನವು ಅಕ್ರಾನ್ತ್ಸಮುದ್ರಃ ಪ್ರಥಮೇ ೫೨೯ನೆಯ ಋಕ್ ಮೇಲೆ ಅಧಿಷ್ಠಿತವಾಗಿದೆ.

|| ದ್ವಾದಶ ಪಂಚಮಃ ಖಣ್ಡಃ || ೫ ||

## ಋಕ್ – ೬೧೭

|| ನಾರಾಯಣಃ ಅನುಷ್ಟುಪ್ ಪುರುಷಃ ||

೩ ೧ ೨ ೩ ೧ ೨ ೩ ೨ ೩ ೧ ೨

**ಸಹಸ್ರಶೀರ್ಷಾಃ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ |**

೧ ೨೦ ೩ ೧ ೨ ೩ ೧ ೨ ೩ ೨

**ಸ ಭೂಮಿಂ ಸರ್ವತೋ ವೃತ್ವಾತ್ಯತಿಷ್ಠದ್ದಶಾಙ್ಗುಲಮ್** || ೩-೬೧೭ ||

೩ ೧ ೨ ೩ ೧ ೨ ೩ ೧ ೨೦ ೩ ೨ ೩ ೨ ೩

ಸಹಸ್ರಶೀರ್ಷಾಃ–ಸಹಸ್ರ–ಶೀರ್ಷಾಃ–ಪುರುಷಃ | ಸಹಸ್ರಾಕ್ಷಃ–ಸಹಸ್ರ–ಅಕ್ಷಃ –ಸ

೧ ೨ ೩ ೧ ೨ ೩ ೨ ೧ ೨೦ ೩ ೧ ೨ ೩ ೨ ೧ ೨೦ ೩

ಹಸ್ರಪಾತ್–ಸಹಸ್ರ–ಪಾತ್ || ಸಃ–ಭೂಮಿಮ್–ಸರ್ವತಃ–ವೃತ್ವಾ | ಅತಿ–ಅ

೨ ೩ ೨

ತಿಷ್ಠತ್–ದಶಾಙ್ಗುಲಮ್–ದಶ–ಅಙ್ಗುಲಮ್ || ೩-೬೧೭ ||

॥ ಪುರುಷವ್ರತಾನಿಪಂಚ । ಪುರುಷೋಽನುಷ್ಟುಪ್ಪುರುಷಃ । ಪ್ರಥಮಮ್ ॥

೨ ೧ ೨ ೧ ೦ ೦ ೨
೧೩.೨.೧. ಉಹುವಾಹಾಉ । ೩ । ಸಹಸ್ರಶೀರ್ಷಾ೨ಪುರೂಽ೨೩ಷಾಃ ॥
೦ ೧ ೨ ೧ ೨ ೧ ೦ ೨ ೧೦
ಸಹಸ್ರಾಕ್ಷಃಸಹಸ್ರಾಽ೨೩ಪಾತ್ ॥ ಸಭೂಮಿ೮\ಸರ್ವತೋವಾಽ೨೩
೨ ೧ ೨ ೧೦ ೨ ೧ ೨
ರ್ತ್ವಾ ॥ ಅತ್ಯತಿಷ್ಠದ್ದಶಾಙ್ಗೂಽ೨೩ಲಾಮ್ । ಉಹುವಾಹಾಉ । ೨ ।
೧ ನ ೨ ೧ ೧ ೧ ೧
ಉಹುವಾಽ೩ಹಾಉ । ವಾಽ೩ ॥ ಇಟ್ ಸ್ಥಿ ಇಡಾಽ೨೩೪೫ ॥

*ದೀ - ೬ / ಪ - ೧೨ / ಮಾ - ೧೦ / ಖೌ ॥ ೧೩.೨೧೯ ॥*

ಸ್ತೋಭ ಭಾಷ್ಯ - ಪಂಚಾನುಗಾನೇ ಏಕಾನುಗಾನೇ ಚ । ಪರಮೇಶ್ವರಃ ಬ್ರಹ್ಮಾದಿಸ್ತಂಬ ಪರ್ಯನ್ತೇ ಜೀವಾತ್ಮನಾ ವ್ಯವಸ್ಥಿತಃ ಅನನ್ತ ಪ್ರಭೇದತ್ವಾತ್ ಸಹಸ್ರಂ ಶಿರಾಂಸಿ ಅಕ್ಷೀಣಿ ಪಾದಾಂಶ್ಚ ಅಸ್ಯೇತಿ ಸಹಸ್ರಶೀರ್ಷಾಃ ಸಹಸ್ರಾಕ್ಷಃ ಸಹಸ್ರಪಾತ್ ಕಾರ್ಯಕಾರಣ ಕರ್ತೃರೂಪತಯಾ ಅನನ್ತರೂಪಃ ಪರಪುರುಷೋ ವ್ಯಾಕೃತಾ ವಸ್ಥಾಯಾಮಿತ್ಯರ್ಥಃ । ಅನ್ತರ್ಯಾಮಿರೂಪತ್ವೇನ ಸರ್ವಸ್ಯ ಪರಿಪೂರಣಾತ್ ಪುರುಷಃ । ಅಕ್ಷಾಣಿ ಇನ್ದ್ರಿಯಾಣಿ । ಕಥಂ ಜೀವಾತ್ಮನಾ ವ್ಯವಸ್ಥಿತ ಇತಿ ಉಚ್ಯತೇ । ಸ ಭೂಮಿಂ ಶರೀರಾದಿ ಲಕ್ಷಣಮಾಧಾರಂ ವೃತ್ವಾ ನಿರ್ವರ್ತ್ಯ ದಶಾಂಗುಲಂ ಪ್ರಾದೇಶಮಾತ್ರ ಪರಿಮಾಣಂ ಹೃದಯಪುಂಡರೀಕಂ ಅತ್ಯತಿಷ್ಠತ್ ಅಧಿತಿಷ್ಠತಿ । ಸರ್ವಗತತ್ವೇಽಪಿ ತಾವತಿ ಪ್ರದೇಶೇ ಚಿತಿಕ್ರಿಯಾಭಿವ್ಯಕ್ತೇಃ । ದಶಾಂಗುಲಮಿತಿ ಮನುಷ್ಯಾದ್ಯಪೇಕ್ಷಯಾ ಉಚ್ಯತೇ । ಸರ್ವೇಷಾಂ ಸ್ಥಾವರಜಂಗಮಾನಾಂ ಅಧಿಷ್ಠಾತೃತ್ವೇನ ಸರ್ವದಾ ಚಿತ್ ಪ್ರಕಾಶೇ ಅವತಿಷ್ಠತೇ । ದ್ವಾಸುಪರ್ಣಾ ಇತ್ಯಾದೌ ತಥಾ ಶ್ರವಣಾತ್ ॥ ಅರ. ಸಾಮ ೨೧೯ ॥

ಪುಟ್ಟ ಕ್ರಿಮಿಯಿಂದ ಬ್ರಹ್ಮನವರೆಗೆ ಅನಂತಭೇದ ಪ್ರಭೇದಗಳ ರೂಪದಿಂದ ತೋರಿಸಿಕೊಳ್ಳುತ್ತಿರುವುದರಿಂದ **ಸಹಸ್ರಶೀರ್ಷಾ** ಪ್ರಾದೇಶಮಾತ್ರ ಜೀವಿಗಳ ಹೃದಯಸ್ಥನಾಗಿ ಸೀಮಿತಗೊಂಡೂ ಆಯಾ ಶರೀರಾದಿ ಲಕ್ಷಣಗಳನ್ನು ಗ್ರಹಿಸಿ ಅನ್ತ ರ್ಯಾಮಿಯಾಗಿ ವ್ಯಾಪಿಸಿರುವುದರಿಂದ **ಪುರುಷ** ಸ್ಥಾವರ ಜಂಗಮಗಳ ಅಧಿ ಷ್ಠಾತೃವಾಗಿ **ಅತ್ಯ ತಿಷ್ಠತ್** ಆಗಿದ್ದಾನೆ.

ಸಾಯಣ ಭಾಷ್ಯ - ಸರ್ವಪ್ರಾಣಿಸಮಷ್ಟಿರೂಪೋ ಬ್ರಹ್ಮಾಣ್ಡದೇಹೋ ವಿರಾಡಾಖ್ಯೋ ಯಃ ಪುರುಷಃ ಸೋಽಯಂ ಸಹಸ್ರಶೀರ್ಷಾಃ । ಸಹಸ್ರಶಬ್ದ ಸ್ಯೋಪಲಕ್ಷಣತ್ವಾತ್ ಅನನ್ತೈಃ ಶಿರೋಭಿರ್ಯುಕ್ತಃ ಇತ್ಯರ್ಥಃ । ಯಾನಿ ಸರ್ವ ಪ್ರಾಣಿನಾಂ ಶಿರಾಂಸಿ ತಾನಿ ಸರ್ವಾಣಿ ತದ್ದೇಹಾನ್ತಃ ಪಾತಿತ್ವಾತ್ತದೀಯಾನ್ಯೇವೇತಿ ಸಹಸ್ರಶೀರ್ಷತ್ವಮ್ । ಏವಂ ಸಹಸ್ರಾಕ್ಷತ್ವಂ ಸಹಸ್ರಪಾದತ್ವಂ ಚ । ಸಃ ಪುರುಷಃ ಭೂಮಿಂ ಬ್ರಹ್ಮಾಣ್ಡ ಗೋಲಕರೂಪಾಂ ಸರ್ವತಃ ಆ ಸಮನ್ತಾತ್ ವೃತ್ವಾ ಪರಿವೇಷ್ಟ್ಯ

ದಶಾಙ್ಗುಲಪರಿಮಿತಂ ದೇಶಮ್ **ಅತ್ಯತಿಷ್ಠತ್** ಅತಿಕ್ರಮ್ಯ ವ್ಯವಸ್ಥಿತಃ । ದಶಾಙ್ಗುಲಮಿತ್ಯುಪಲಕ್ಷಣಮ್ । ಬ್ರಹ್ಮಾಣ್ಡಾದ್ಬಹಿರಪಿ ಸರ್ವತೋ ವ್ಯಾಪ್ಯಸ್ಥಿತ ಇತ್ಯರ್ಥಃ ॥

**ಪುರುಷಃ** ಪೂರ್ವಂ ಸೃಷ್ಟಿಗೆಪೂರ್ವದಲ್ಲಿ ಉಷ್–ಔಷತ್ ಸಕಲ ಪಾಪಗಳನ್ನೂ ದಹಿಸಿದನು ಆದುದರಿಂದ – ಪೂರ್ವ + ಉಷ್ ಪೂರುಷಃ ಪುರುಷಃ ಬೃಉ ೧–೪–೧ । ತಾನು ಸೃಷ್ಟಿಸಿದ ಸಕಲ ದೇಹಗಳಲ್ಲೂ ಪ್ರವೇಶಿಸಿ ಶಯನ ಮಾಡುತ್ತಿರುವುದರಿಂದ – ಪುರಿಶೇತೇ ಪುರುಷಃ ಶ. ಬ್ರಾ ೧೩–೬–೨–೧ । ಸಮಸ್ತ ವಿಶ್ವವೂ ಈ ಪರಮಪುರುಷನ ದೇಹವು. ಇವನ ಸ್ವರೂಪವು ಸಮಸ್ತವಿಶ್ವವನ್ನೂ ಮೀರಿರುತ್ತದೆ – ಐ.ಬ್ರಾ ೨.೧೪ । ಛಾಂ.ಉ ೫–೧೮–೧ । ಮತ್ತು ೧–೬–೬ । ಕಠ ೪–೧೨, ೧೩, ೧೭ । ವಿರಾಟ್ ಪುರುಷನು ಪರಮಾತ್ಮನು. **ಸಹಸ್ರಶೀರ್ಷಾ** ಅಸಂಖ್ಯಾತ ಶಿರಸ್ಸುಗಳನ್ನುಳ್ಳವನು. ಅನಂತಜ್ಞಾನಶಕ್ತಿ ಸಂಪನ್ನನು–ಸಹಸ್ರಂ ಬಹುನಾಮ ನಿಘಂ೩–೧ । **ಸಹಸ್ರಾಕ್ಷಃ** ಅಸಂಖ್ಯಾತ ಕಣ್ಣುಗಳುಳ್ಳವನು. ಅನಂತ ದರ್ಶನಶಕ್ತಿಯುಳ್ಳವನು **ಸಹಸ್ರಪಾತ್** ಅಸಂಖ್ಯಾತ ಪಾದಗಳುಳ್ಳವನು. ಅನಂತ ಗತಿಶಕ್ತಿಯುಳ್ಳವನು **ಸಃ** ಆ ಪರಮಪುರುಷನು **ಭೂಮಿಮ್** ಭೂಮಿಯನ್ನೂ ತ್ರಿಭುವನಗಳನ್ನೂ ಇಡೀಬ್ರಹ್ಮಾಂಡವನ್ನೂ **ಸರ್ವತಃ ವೃತ್ವಾ** ಸುತ್ತಲೂ ಸಂಪೂರ್ಣವಾಗಿ ಆವರಿಸಿ ಸರ್ವತ್ರ ವ್ಯಾಪಿಸಿಯೂ ಸಹ **ದಶಾಙ್ಗುಲಮ್** ದಶಾಂಗುಲ ಸಂಪುಟ– ಎರಡೂ ಕೈಗಳಲ್ಲಿ ಹಿಡಿದುಕೊಂಡು ತನ್ನ ವಶದಲ್ಲಿಟ್ಟುಕೊಂಡೂ ಹತ್ತೂ ಇನ್ದ್ರಿಯಗಳಿಂದ ಭೋಗ್ಯವಾದ ಜಗತ್ತನ್ನೂವ್ಯಾಪಿಸಿ ಆವರಿಸಿಯೂ ಪಂಚ ಸ್ಥೂಲ ಮಹಾಭೂತರೂಪವಾದ ಮತ್ತು ತನ್ಮಾತ್ರಕವೆನಿಸಿರುವ ಪಂಚಸೂಕ್ಷ್ಮಭೂತರೂಪವಾದ ದಶಾಂಗುಲನ್ಯಾಯದಂತಿರುವ ಅಂದರೆ ಪೃಥ್ವಿಗಿಂತ ಹತ್ತುಪಟ್ಟು ದೊಡ್ಡದಾದ ನೀರನ್ನೂ ನೀರಿಗಿಂತ ಹತ್ತುಪಟ್ಟುದೊಡ್ಡದಾದ ಅಗ್ನಿಯನ್ನೂ ಅಗ್ನಿಗಿಂತ ಹತ್ತುಪಟ್ಟು ದೊಡ್ಡದಾದ ವಾಯುವನ್ನೂ ವಾಯುವಿಗಿಂತ ಹತ್ತುಪಟ್ಟುದೊಡ್ಡದಾದ ಆಕಾಶವನ್ನೂ ಒಳಗೊಂಡ ಭೂತಜಗತ್ತನ್ನು ಸರ್ವತ್ರವ್ಯಾಪಿಸಿಯೂ ಆವರಿಸಿಯೂ ಇವುಗಳನ್ನು ಮೀರಿ ಅತಿಕ್ರಮಿಸಿ ಇವುಗಳ ಹತ್ತರಷ್ಟಕ್ಕಿಂತಲೂ **ಅಧಿತಿಷ್ಠತ್** ಮಿಗಿಲಾಗಿ ವ್ಯಾಪಿಸಿದ್ದಾನೆ ಸ್ಥಾಪಿಸಿದ್ದಾನೆ.

ಸಕಲಸೃಷ್ಟಿಯ ಸಮಷ್ಟಿರೂಪವಾದ ಪಂಚೇನ್ದ್ರಿಯಗೋಚರವಾಗುವ ಹಾಗೂ ಆಗದಿರುವ ಅನುಭವಕ್ಕೆಟಕುವ ಹಾಗೂ ಎಟುಕದಿರುವ ಸಮಸ್ತ ಬ್ರಹ್ಮಾಂಡವೇ ದೇಹವಾಗಿರುವ ಪುರುಷನು ವ್ಯಷ್ಟಿಯಾಗಿ ಪ್ರತಿಜೀವಿಯ ದೇಹವೆಂಬ ಕಾರ್ಯಕಾರಣ ಕರ್ತೃರೂಪದಿಂದ ಅನಂತ ಶಿರಸ್ಸು ಕಣ್ಣು ಪಾದಗಳುಳ್ಳವನಾಗಿ ಅಖಿಲಬ್ರಹ್ಮಾಂಡದ ಪ್ರತೀಕವಾದ ಭೋಗ್ಯವಾದ ಅನುಭವವೇದ್ಯವಾದ ಭೂಮಿಯೆಲ್ಲವನ್ನೂ ಸರ್ವತ್ರ ವ್ಯಾಪಿಸಿಯೂ ಆವರಿಸಿಯೂಸಹ ಶರೀರಾದಿಲಕ್ಷಣಗಳಿಂದ ನಿವೃತ್ತವಾಗಿ ದಶಾಂಗುಲ ನ್ಯಾಯದಂತೆ ಬ್ರಹ್ಮಾಂಡಗಳನ್ನೂಮೀರಿ ಅತಿಕ್ರಮಿಸಿ ಹತ್ತುಪಟ್ಟು ದೊಡ್ಡವನಾಗಿ ವ್ಯಾಪಿಸಿರುತ್ತಾನೆ.

*ಪುರುಷಂ ಸಹಸ್ರಶೀರ್ಷಂ ದಲ್*
*ಸಹಸ್ರಾಕ್ಷ ಸಹಸ್ರಪಾತ್ ।*
*ಮುಚ್ಚುತೀ ಬುವಿಯಂ ಮೀರಿ*
*ನಿಂತಂಪತ್ತಂಗುಲಕ್ಕವಂ ॥*

॥ ನಾರಾಯಣಃ ಅನುಷ್ಟುಪ್ ಪುರುಷಃ ॥

೩ ೨ ೩ ೨ಉ ೩ ೧ ೨ ೩ ೧ ೨ ೩ ೧ ೨ ೩ ೧ ೨
ತ್ರಿಪಾದೂರ್ಧ್ವ ಉದೈತ್ಪುರುಷಃ ಪಾದೋಽಸ್ಯೇಹಾಭವತ್ ಪುನಃ ।
೨ ೩ ೨ ೩ ೨೦ ೩ ೨ ೩ ೨
ತಥಾ ವಿಷ್ವಜ್ ವ್ಯಕ್ರಾಮದಶನಾನಶನೇ ಅಭಿ ॥ ೪-೬೧೮ ॥

೩ ೨ ೩ ೨ ೩ ೨ ೩ ೧ ೨೦ ೧ ೨೦ ೧ ೨
ತ್ರಿಪಾತ್–ತ್ರಿ–ಪಾತ್–ಊರ್ಧ್ವಃ–ಉತ್–ಐತ್–ಪುರುಷಃ । ಪಾದಃ–ಅಸ್ಯ–ಇಹ
೩ ೨ ೩೦೧೨ ೧ ೨೦ ೧ ೨೦ ೨ ೩ ೨ ೩
–ಅಭವತ್–ಪುನರಿತಿ ॥ ತಥಾ–ವಿಷ್ವಜ್–ವಿ–ಸ್ವಜ್–ವಿ–ಅಕ್ರಾಮತ್ । ಅಶ
೨ ೩ ೧ ೨ ೩ ೨
ನಾನಶನೇ–ಅಶನ–ಅನಶನೇ–ಇತಿ–ಅಭಿ ॥ ೪-೬೧೮ ॥

॥ ಪುರುಷವ್ರತಮ್ ॥ ಪುರುಷೋಽನುಷ್ಟುಪ್ಪುರುಷಃ ॥ ದ್ವಿತೀಯಮ್ ॥

೨ ೧ ೦ ೦ — ೧೦ ೦ ೦
೧೩೩.೧. ಉಹುವೌಹೋವಾಽ೨ । ೩ । ತ್ರಿಪಾದೂರ್ಧ್ವಉದೈ
೨ ೧೦ ೦ ೦ ೦ ೨೧ ೨ ೧ ೦
ತ್ಪುರೂಽ೨೩ಷಾಃ ॥ ಪಾದೋಸ್ಯೇಹಾಭವತ್ಪೂಽ೨೩ನಾಃ ॥ ತಥಾ
೨ ೧ ೨ ೦ ೧೦ ೨ ೧
ವಿಷ್ವಜ್ವಿಯಕ್ರಾಽ೨೩ಮಾತ್ ॥ ಅಶನಾನಶನೇಆಽ೨೩ಭೀ । ಉಹು
೦ ೦ — ೧ ೦ ^ ೩
ವೌಹೋವಾಽ೨ । ೨ । ಉಹುವೌ । ಹೋಽ೨ । ವಾಽ೨೩೪ ।
೫೦ ೦ ೩ ೫ ೨ ೧ ೦ ೦ —
ಔಹೋವಾ । ಈಽ೨೩೪ಡಾ । ಉಹುವೌಹೋವಾಽ೨ । ೨ ।
೧ ೦ ^ ೩ ೫೦ ೦ ೩
ಉಹುವೌ । ಹೋಽ೨ । ವಾಽ೨೩೪ । ಔಹೋವಾ । ಸೂಽ೨೩
೫ ೨ ೧ ೦ ೦ — ೨ ೧ ೦ ^
೪ವಾಃ । ಉಹುವೌಹೋವಾಽ೨ । ೨ । ಉಹುವೌ । ಹೋಽ೨ ।
೩ ೫೦ ೦ ೩ ೧ ೧ ೧
ವಾಽ೨೩೪ । ಔಹೋವಾ ॥ ಊಽ೨೩೪೫ ॥

ದೀ – ೩೭ / ಪ – ೨೮ / ಮಾ – ೬ / ಜರ್ಗ ॥ ೧೪.೨೨೦ ॥

ಸ್ತೋಭ ಭಾಷ್ಯ - ಉಹುವಾ ಹೋವಾ । ಇತ್ಯನ್ನಮಾಹ್ವಯನ್ತಿ ಭೋಕ್ತೃತಯಾವಸ್ಥಾನಾತ್ ಇತಿ ಸ್ತೋಭಪದಾರ್ಥಃ । ನನು ಪರಮಾತ್ಮನೋ ವಿಶ್ವಾಕಾರತಯಾ ಪರಿಣಾಮೇ ಸತಿ ಅನಿತ್ಯತಾ ಪ್ರಸರತೀತಿ ಅತ ಆಹ ತ್ರಿಪಾದೂರ್ಧ್ವಂ ಇತಿ ನ ಕ್ಷೀರವತ್ ಪರಿಣಮತೇ । ಅಪಿ ತು ಸ್ವರೂಪಾದಪ್ರಚ್ಯುತಸ್ಯ ಇಚ್ಛಾಧೀನಂ ವಿಭೂತಿಮಾತ್ರಂ ವಿಶ್ವಂ ಪಾದಃ ಅಂಶಃ ಭವತಿ । ತತ ಉದ್ಗತಃ ತ್ರಿಪಾದಧಿಕಃ ದೇಶ ಕಾಲಾಽಽಕಾರಾನವಚ್ಛೇದಾತ್ ತ್ರಿಪಾದಿತಿ ಕಾರಣಾವಸ್ಥಾಽನವಚ್ಛಿನ್ನಾ ಉಚ್ಯತೇ । ಪಾದ ಇತಿ ಪರಿಮಿತಾ । ಸಾಽಽಗಮಪಾಯಿ ಕಾರ್ಯರೂಪಮುಚ್ಯತೇ । ತಥಾ ಅಪರಿತ್ಯಕ್ತ ಸ್ವರೂಪತಯಾ **ವಿಷ್ವಙ್** ಅಧೋಗತಂ ಜಗತ್ **ವ್ಯಕ್ರಾಮತ್** ವಿಕ್ರಾಮತಿ-ವ್ಯಾಪ್ನೋತಿ॥ **ಅಶನಾನಶನೇ** ಅಭಿ-ಆಶನಂ ಅನಶನಂ ಚ ಪ್ರತಿ ಭೋಗಾರ್ಥಂ ಮೋಕ್ಷಾರ್ಥಂ ಚ ಪ್ರಾಣಿನಃ ಅಧಿತಿಷ್ಠತಿ ಇತ್ಯರ್ಥಃ । ಇಡಾ ಸ್ವರಿತಿ ಚ ಭೋಗ್ಯಂ ಸ್ವರೂಪಲಾಭಶ್ಚ ಸ್ತೋಭೈರನೂಚ್ಯತೇ ॥

**ಉಹುವಾ ಹೋವಾ** ಎಂದು ಅನ್ನಸಂಕೇತವಾದ ಭೋಗೈಶ್ವರ್ಯಗಳನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿಸಿದೆ. **ಪಾದ** ಶಬ್ದ ಭಗವಂತನ ಪರಿಮಿತಿಯನ್ನು ಸೂಚಿಸುವುದೆಂಬ ಶಂಕೆ ನಿವಾರಿಸಲು ಭಗವಂತನ ಶಕ್ತಿ ವೈಭವ ಅಪರಿಮಿತವಾದದ್ದಾಗ್ಯೂ ಹಾಲು ಮೊಸರು ಆಜ್ಯವಾಗುವಂತೆ ಪರಿಣಾಮಹೊಂದದೆ ಸ್ವರೂಪಚ್ಯುತನಾಗದೆ ವಿಭೂತಿಮಾತ್ರದಿಂದ ತ್ರಿಪಾದಕ್ಕೂ ಆಚೆ ಪಾತಾಳಾದಿ ಲೋಕಗಳನ್ನು ಆಕ್ರಮಿಸಿಯೂ ಅಂದರೆ ಅದರ ಆಚೆಗೂ ವ್ಯಾಪಿಸಿದ್ದಾನೆಂದಿದೆ. ಜೀವ ಜಗತ್ತಿನ ಅಶನ-ಭೋಗ ಅನಶನ-ಮೋಕ್ಷಗಳಿಗೂ ಭಗವಂತನೇ ಅಧಿಷ್ಠಾತೃವಾಗಿದ್ದಾನೆ । ಅರ. ಸಾ ೨೨ ॥

ಯೋಽಯಂ ತ್ರಿಪಾತ್ಪುರುಷಃ ಸಂಸಾರಸ್ಪರ್ಶರಹಿತೋ ಬಹುಲಸ್ವರೂಪಃ ಸೋಽಯಮ್ **ಊರ್ಧ್ವಮ್ ಉದೈತ್** । ಅಸ್ಮಾದಜ್ಞಾನ ಕಾರ್ಯಾತ್ಸಂಸಾರಾದ್ಬಹಿರ್ಭೂತಃ ಸನ್ ತತ್ರತ್ಯೈರ್ಗುಣದೋಷೈರಸ್ಪೃಷ್ಟಃ ಉತ್ಕರ್ಷೇಣ ಸ್ಥಿತವಾನ್ । ಅಸ್ಯ ಯೋಽಯಂ **ಪಾದಃ** ಲೇಶಃ ಸೋಽಯಮಿಹ ಮಾಯಾಯಾಂ ಪುನರಭವತ್ । ಸೃಷ್ಟಿಸಂಹಾರಾಭ್ಯಾಂ ಪುನಃಪುನರಾಗಚ್ಛತ್ । ಅಸ್ಯ ಸರ್ವಸ್ಯ ಜಗತಃ ಪರಮಾತ್ಮಲೇಶತ್ವಂ ಭಗವತಾಪ್ಯುಕ್ತಂ - ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋಜಗತ್ ಇತಿ - ಭ.ಗೀ ೧೦-೪೨ ॥ ತಥಾ ಮಾಯಾಯಾ ಮಾಗತ್ಯಾನನ್ತರಂ **ವಿಷ್ವಙ್** ದೇವತಿರ್ಯಗಾದಿರೂಪೇಣ ವಿವಿಧಃ ಸನ್ **ವ್ಯಕ್ರಾಮತ್** ವ್ಯಾಪ್ತವಾನ್ । ಕಿಂ ಕೃತ್ವಾ। **ಅಶನಾನಶನೇ** ಅಭಿಲಕ್ಷ್ಯ । ಅಶನಂ ಭೋಜನಾದಿ ವ್ಯವಹಾರೋಪೇತಂ ಚೇತನಂ ಪ್ರಾಣಿಜಾತಮ್ । ಅನಶನಂ ತದ್ರಹಿತಮಚೇತನಂ ಗಿರಿನದ್ಯಾದಿಕಮ್ । ತದುಭಯಂ ಯಥಾ ಸ್ಯಾತ್ತಥಾಽಯಮೇವ ವಿವಿಧೋಭೂತ್ವಾ ವ್ಯಾಪ್ತವಾನಿತ್ಯರ್ಥಃ ॥

**ತ್ರಿಪಾತ್** ಮೂರು ಪಾದಗಳಿಗಿಂತ ಅತೀತನು ಅಂದರೆ ತ್ರಿಗುಣಾತೀತನು. ಜನ ಮಹ ಸತ್ಯಲೋಕಗಳಿಗಿಂತಲೂ ಆಚೆಗೆ ಉದರ ಹೃದಯ ದಹರಗಳನ್ನು ಮೀರಿದ ಸಹಸ್ರಾರದಲ್ಲಿ ಜಾಗೃತ್ ಸ್ವಪ್ನ ಸುಷುಪ್ತಿಸ್ಥಾನಗಳಿಗಿಂತ ಅತೀತವಾದ ತುರೀಯಾವಸ್ಥೆಯಲ್ಲಿ

ಬ್ರಹ್ಮವನ್ನು ಪ್ರತಿಪಾದಿಸುವ ವೇದತ್ರಯಿಗಳಿಗೂ ಅತೀತನಾಗಿ ಇನ್ದ್ರಿಯಗೋಚರವಾಗಿ ಭೋಗ್ಯವಿಷಯವಾಗಿರುವ ಪ್ರತ್ಯಕ್ಷ ಜಗತ್ತಿನ ಮೂರರಷ್ಟಕ್ಕಿಂತಲೂ ಮಿಗಿಲಾಗಿ ಸಮಸ್ತವನ್ನೂ ಆವರಿಸಿ ಒಳಗೊಂಡಿರುವ ಸಚ್ಚಿದಾನಂದ ಸ್ವರೂಪನಾದ ವಿರಾಟ್ ಪುರುಷನು **ಊರ್ಧ್ವಮ್ ಉದೈತ್** ಪೃಥ್ವೀ ಆದಿ ಇನ್ದ್ರಿಯ ಗೋಚರವಾದ ಬದಲಾಗುತ್ತಿರುವ ನಶ್ವರವಾದ ಸ್ಥೂಲಜಗತ್ತಿಗಿಂತಲೂ ಅತೀತವಾಗಿ ಉತ್ತಮವಾಗಿರುವ ಸ್ಥೂಲಪ್ರಪಂಚದ ಗುಣದೋಷಾದಿಗಳಿಂದ ದೂರವಾಗಿರುವ ಸೃಷ್ಟಿಕಾರ್ಯಕ್ಕೆ ಒಳಪಡದ ಅತ್ಯಂತಸೂಕ್ಷ್ಮವಾದ ಪರಮಪದವೆನಿಸುವ ಅವ್ಯಕ್ತಾವಸ್ಥೆಯಲ್ಲಿ ಪುರುಷನು ಸ್ಥಾಪಿತನಾಗಿದ್ದಾನೆ ಪ್ರತಿಷ್ಠಿತನಾಗಿದ್ದಾನೆ. **ಅಸ್ಯಪಾದಃ** ಈ ಆದಿ ಪುರುಷನ ಕಾಲುಭಾಗವಾದ ಅಂಶವು ಅಲ್ಪಭಾಗವು ತನ್ನ ಶಾಶ್ವತಸ್ವರೂಪವನ್ನು ಮರೆಮಾಚಿಕೊಂಡು **ಇಹ** ಈ ಸಂಸಾರವೆನಿಸಿಕೊಂಡಿರುವ ಪ್ರಪಂಚವಾಗಿ ಹಿಂದಿನ ಕಲ್ಪಗಳಂತೆಯೇ ಪುನಃ ಮತ್ತೆ ಮತ್ತೆ ಎಡೆಬಿಡದೆ ಸೃಷ್ಟಿಸ್ಥಿತಿಲಯರೂಪವಾಗಿ **ಅಭವತ್** ಆವಿರ್ಭೂತವಾಗಿ ಪ್ರಕಟವಾಗಿ ಕಾಣಿಸಿಕೊಂಡಿತು **ತತಃ** ವ್ಯಕ್ತರೂಪವನ್ನು ಹೊಂದಿದ ನಂತರ **ಸಾಶನಾನಶನೇ ಅಭಿ** ಹಸಿವುಬಾಯಾರಿಕೆಯುಳ್ಳ ಆಹಾರನೀರನ್ನು ಸೇವಿಸುವ ಚೇತನವೆನಿಸುವ ಜೀವ ಜಗತ್ತಾಗಿಯೂ ಹಸಿವುಬಾಯಾರಿಕೆ ಇಲ್ಲದ ಆಹಾರನೀರನ್ನು ಸೇವಿಸದ ಅಚೇತನವಾದ ಜಡಜಗತ್ತೆಂದೂ ಎರಡು ಬಗೆಯಾಗಿ ವಿಭಕ್ತಗೊಂಡು **ವಿಷ್ವಙ್** ವಿಶ್ವದ ನಾನಾ ರೂಪವಾಗಿ **ವ್ಯಕ್ರಾಮತ್** ವ್ಯಾಪಿಸಿತು.

ಇನ್ದ್ರಿಯಗಳಿಗೆ ಪ್ರತ್ಯಕ್ಷಗೋಚರವಾಗದ ವಿರಾಟ್‌ಪುರುಷನ ಮುಕ್ಕಾಲು ಭಾಗವಾದ ಮೂರುಪಾದಗಳು ಸಂಸಾರಾತೀತವಾದ ಉತ್ಕೃಷ್ಟವಾದ ದಿವ್ಯಲೋಕಗಳೆಂಬ ಪರಮಪದದಲ್ಲಿ ಸ್ಥಾಪಿತವಾಗಿವೆ ಪ್ರತಿಷ್ಠಿತವಾಗಿವೆ. ಈ ಪರಮಪುರುಷನ ಅಲ್ಪಾಂಶವಾದ ಕಾಲುಭಾಗವು ತನ್ನ ಶಾಶ್ವತಸ್ವರೂಪವನ್ನು ಮರೆಮಾಚಿಕೊಂಡು ತನ್ನ ಇಚ್ಛಾಧೀನ ವಿಭೂತಿಮಾತ್ರವಾಗಿ ಹಿಂದಿನಕಲ್ಪಗಳಂತೆಯೇ ಇನ್ದ್ರಿಯಗೋಚರವಾದ ಸೃಷ್ಟಿ ಸ್ಥಿತಿ ಲಯರೂಪವಾದ ಸಂಸಾರವೆಂಬ ಜಗತ್ತಿನರೂಪವಾಗಿ ಪದೇಪದೇ ಪ್ರಕಟವಾಗುತ್ತಿದೆ. ಹೀಗೆ ವ್ಯಕ್ತರೂಪವನ್ನು ಪಡೆಯುತ್ತಲೇ ಕಾಲಕ್ರಮಾವಚ್ಛಿನ್ನನೂ ಜಗದಾತ್ಮನೂ ಆದ ಈ ಪರಮಪುರುಷನು ವ್ಯಷ್ಟಿರೂಪದಿಂದ ಹಸಿವುಬಾಯಾರಿಕೆಗಳುಳ್ಳ ಚೇತನ ಜಗತ್ತಾಗಿಯೂ ಹಸಿವು ಬಾಯಾರಿಕೆಗಳಿಲ್ಲದ ಅಚೇತನವಾದ ಜಡ ಜಗತ್ತಾಗಿಯೂ ಸ್ವೇಚ್ಛೆಯಿಂದ ವಿಭಕ್ತವಾಗಿ ನಾನಾ ಕಾರಣದಿಂದಲೂ ನಾನಾ ರೂಪದಿಂದಲೂ ಜಗತ್ತನ್ನು ವ್ಯಾಪಿಸಿದ್ದಾನೆ.

*ಮುಪ್ಪಾಲತೀತನಾಗಿರ್ಪಂ ಪಾಲೊಂದಾತನದಿಲ್ಲಿ ದಲ್ ।*
*ಚರಾಚರಾತ್ಮಕಾಕಾರಂ ತೋರ್ಪನಿಲ್ಲಿಂತವಂ ಗಡಂ ॥*

॥ ನಾರಾಯಣಃ । ಅನುಷ್ಟುಪ್ ಪುರುಷಃ ॥

ಪುರುಷ ಏವೇದಂ ಸರ್ವಂ ಯದ್ ಭೂತಂ ಯಚ್ಚ ಭಾವ್ಯಮ್ ।
ಪಾದೋಽಸ್ಯ ಸರ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ ॥

ಪುರುಷಃ–ಏವ–ಇದಮ್–ಸರ್ವಮ್ । ಯತ್–ಭೂತಮ್–ಯತ್–ಚ–ಭಾವ್ಯಮ್ ॥ ಪಾದಃ–ಅಸ್ಯ–ಸರ್ವಾ–ಭೂತಾನಿ । ತ್ರಿಪಾತ್–ತ್ರಿ–ಪಾತ್–ಅಸ್ಯ–ಅಮೃತಮ್–ಅ–ಮೃತಮ್–ದಿವಿ ॥ ೫–೬೧೯ ॥

॥ ಪುರುಷವ್ರತಮ್ ॥ ಪುರುಷೋಽನುಷ್ಟುಪ್ಪುರುಷಃ ॥ ತೃತೀಯಮ್ ॥

೧೩೪.೧. ಇಯೌಹೋವಾಽ೨ । ೩ । ಪುರುಷಏವೇದಂ ಸಾಽ೨೩ರ್ವಾಮ್ ॥ ಯದ್ಭೂತಂಯಚ್ಚಭಾವಾಽ೨೩ಯಾಮ್ ॥ ಪಾದೋಸ್ಯಸರ್ವಾಭೂತಾಽ೨೩ನೀ ॥ ತ್ರಿಪಾದಸ್ಯಾಮೃತಂದಾಽ೨೩ಇವೀ । ಇಯೌಹೋವಾಽ೨ । ೨ । ಇಯೌ । ಹೋಽ೨ । ವಾಽ೨೩ಳ । ಔಹೋವಾ । ಈಽ೨೩ಳಡಾ । ಇಯೌಹೋವಾಽ೨ । ೨ । ಇಯೌ । ಹೋಽ೨ । ವಾಽ೨೩ಳ । ಔಹೋವಾ । ಜ್ಯೋಽ೨೩ಳತೀಃ । ಇಯೌಹೋವಾಽ೨ । ೨ । ಇಯೌ । ಹೋಽ೨ । ವಾಽ೨೩ಳ । ಔಹೋವಾ ॥ ಈಽ೨೩ಳ೫ ॥

ದೀ – ೩೭ / ಪ – ೨೮ / ಮಾ – ೫ / ಜು ॥ ೧೫.೨೨೧ ॥

ಸ್ತೋಭ ಭಾಷ್ಯ – ನನು ಜಗತಃ ವ್ಯತಿರೇಕೇ ಪುರುಷಸ್ಯ ಜಗತ್ ಅಂಶ ಭೂತಮಿತಿ ನ ಘಟತೇ । ಅತಃ ಉಚ್ಯತೇ – **ಪುರುಷ ಏವೇತಿ** ಕಾಲತ್ರಯಾವಚ್ಛಿನ್ನ ಜಗದಾತ್ಮನಾ ಸ್ವೇಚ್ಛಾವಶೇನ ಆಸ್ತೇ । ಪುನಶ್ಚ ಚಿತ್ಪ್ರಕಾಶಮಾತ್ರೇಣ ಕೇವಲೇನ ರೂಪೇಣ । ಅತಃ ಕಾದಾಚಿತ್ಕತ್ವಾತ್ ಜಗದಾಖ್ಯಂ ರೂಪಂ ಪಾದತ್ವೇನ ಕಥಿತಮ್ । ಚಿದಾನಂದರೂಪತಾ ತು ಕಾರಣತ್ವೇನ ಸರ್ವದಾವಸ್ಥಾನಾತ್ ಅಮೃತಂ ಚಿತೇರ ವಿಲೋಪಾತ್ । ದಿವಿ ದ್ಯೋತನವತಿ ಸ್ವರೂಪ ಇತಿ ಚ ಉಕ್ತಮ್ । ೨೨೧ ॥

ಜಗದ್ವ್ಯತಿರಿಕ್ತವಾಗಿರುವ ಪುರುಷನ ಅಂಶಭೂತವಾಗಿ ಜಗತ್ತು ಘಟಿಸಲಾರ ದೆಂಬುದನ್ನು ಪ್ರತಿಪಾದಿಸಲು **ಪುರುಷ ಏವೇತಿ** ಈ ಜಗತ್ತು ಪುರುಷನೇ ಎಂದು ಸ್ಪಷ್ಟವಾಗಿ ಏವ ಪದವನ್ನು ಹೇಳಿದೆ. ಕಾಲತ್ರಯಗಳಿಂದ ವಿಭಕ್ತವಾಗಿರುವ ಜಗತ್ತಿನ ರೂಪವಾಗಿರುವುದು ಯಾರಿಗೂ ಯಾವುದಕ್ಕೂ ಯಾವಾಗಲೂ ಅಧೀನವಾಗಿರದ ಪುರುಷನ ಸ್ವ ಇಚ್ಛೆಯಿಂದ ಚಿತ್ಪ್ರಕಾಶವಾಗಿ ಕೇವಲ ರೂಪಮಾತ್ರವಾಗಿರುವುದನ್ನೇ ಪಾದಮಾತ್ರವೆಂದು ಮಾಂಡೂಕ್ಯೋಪನಿಷತ್ ತಿಳಿಸಿದೆ. ಚಿದಾನಂದ ಸ್ವರೂಪವು ಸರ್ವದಾ ಸರ್ವಾವಸ್ಥೆಯಲ್ಲೂ ಯಾವಲೋಪವೂ ಇಲ್ಲದೆ ದಿವ್ಯ ಜ್ಯೋತಿ ಸ್ವರೂಪ ವಾಗಿ ಚಿತ್ತದಲ್ಲಿ ನೆಲಸತಕ್ಕದ್ದಾಗಿದೆ.

ಸಾಯಣ ಭಾಷ್ಯ – ಯತ್ ಇದಂ ವರ್ತಮಾನಂ ಜಗತ್ ತತ್ಸರ್ವಂ **ಪುರುಷ ಏವ** । **ಯದ್ ಭೂತಮ್** ಉತ್ಪನ್ನಂ ಜಗತ್ **ಯಚ್ಚ ಭಾವ್ಯಂ** ಭವಿಷ್ಯಜ್ಜಗತ್ ತದಪಿ ಪುರುಷ ಏವ । ಯಥಾಽಸ್ಮಿನ್ ಕಾಲೇ ವರ್ತಮಾನಾಃ ಪ್ರಾಣಿನಃ ಸರ್ವೇಽಪಿ ಚರಾ ಚರಾತ್ಮಕ ಪುರುಷಸ್ಯಾವಯವಾಃ ತಥೈವ ಗತಾಗಾಮಿನೋರಪಿ ಕಲ್ಪಯೋರ್ದ್ರಷ್ಟವ್ಯ ಮಿತ್ಯಭಿ ಪ್ರಾಯಃ । ಏತದೇವ್ಯೋಭಯಂ ಸ್ಪಷ್ಟೀಕ್ರಿಯತೇ । **ಅಸ್ಯ** ಪುರುಷಸ್ಯ **ಸರ್ವಾಣಿ ಭೂತಾನಿ** ಕಾಲತ್ರಯವರ್ತೀನಿ ಪ್ರಾಣಿಜಾತಾನಿ **ಪಾದಃ** ಚತುರ್ಥೋಽಂಶಃ । **ಅಸ್ಯ** ಪುರುಷಸ್ಯಾವಶಿಷ್ಟಂ **ತ್ರಿಪಾತ್** ಸ್ವರೂಪಮ್ **ಅಮೃತಂ** ವಿನಾಶರಹಿತಂ ಸತ್ **ದಿವಿ** ದ್ಯೋತನಾತ್ಮಕೇ ಸ್ವಪ್ರಕಾಶಸ್ವರೂಪೇ ವ್ಯವತಿಷ್ಠತೇ ಇತಿ ಶೇಷಃ । ಯದ್ಯಪಿ ಸತ್ಯಂ ಜ್ಞಾನಮನನ್ತಂ ಬ್ರಹ್ಮ ತೈ.ಆಅ–೧ ತೈ.ಉ.೨–೧ । ಇತ್ಯನನ್ತಸ್ಯ ಪರಬ್ರಹ್ಮಣೋಹಿ । ಯದನ್ತತ್ವಾಭಾವಾತ್ಪಾದಚತುಷ್ಟಯಂ ನಿರೂಪಯಿತುಮಶಕ್ಯಂ ತಥಾಪಿ ಜಗದಿದಂ ಬ್ರಹ್ಮಸ್ವರೂಪಾಪೇಕ್ಷಯಾ ಅಲ್ಪಮಿತಿ ವಿವಕ್ಷಿತತ್ವಾತ್ ಪಾದತ್ವೋಪಚಾರ ॥

**ಇದಂ ಸರ್ವಂ** ಈ ಹಿಂದಿನ ಕಲ್ಪಗಳಂತೆಯೇ ಪ್ರಕೃತವಾದ ವರ್ತಮಾನ ಕಲ್ಪದಲ್ಲೂ ಸೃಷ್ಟಿಯಾಗಿ ಪಂಚೇನ್ದ್ರಿಯಗೋಚರವಾಗುತ್ತಿರುವ ಸಮಸ್ತವಾದ ಚರಾಚರ ಜಗತ್ತೆಲ್ಲವೂ **ಪುರುಷ** ಏವ ಪರಮ ಪುರುಷನೇ ಆಗಿದ್ದಾನೆ. **ಯದ್ ಭೂತಮ್** ಈಗಾಗಲೇ ಹಿಂದಿನ ಕಲ್ಪಗಳಲ್ಲಿ ಸೃಷ್ಟಿಯಾಗಿದ್ದ ಚ ಮತ್ತು **ಯಚ್ಚ ಭಾವ್ಯಂ** ಮುಂದೆ ಬರುವ ಭವಿಷ್ಯತ್ತಿನ ಕಲ್ಪಗಳಲ್ಲಿ ಸೃಷ್ಟಿಯಾಗುವ ಸಮಸ್ತ ಚರಾಚರ ಜಗತ್ತೂ **ಅಸ್ಯ** ಈ ಪರಮಪುರುಷನ **ಪಾದಃ** ಅಲ್ಪಾಂಶವಾದ ಕೇವಲ ಕಾಲು ಭಾಗಮಾತ್ರ **ಅಸ್ಯ** ಈ ಪುರುಷನ **ತ್ರಿಪಾತ್** ಹೆಚ್ಚಿನ ಅಂಶವಾದ ಮುಕ್ಕಾಲು ಭಾಗವು **ದಿವಿ** ಪ್ರಕಾಶಮಾನವಾದ ದ್ಯುಲೋಕ ಅಂತರಿಕ್ಷಗಳಂತೆ ಇನ್ದ್ರಿಯಾತೀತವಾದ **ಅಮೃತಂ** ಮರಣ ರಹಿತವೂ ನಾಶರಹಿತವೂ ಶಾಶ್ವತವೂ ಆದ ನಿಜಸ್ಥಿತಿಯೆನಿಸಿರುವ ಪರಮ ಪದವಾಗಿದೆ.

ಕಲ್ಪಕಲ್ಪಾಂತರಗಳಿಂದ ಸೃಷ್ಟಿ ಸ್ಥಿತಿ ಲಯಗಳಿಗೊಳಪಟ್ಟ ತ್ರಿಗುಣಾತ್ಮಕವಾದ ಇನ್ದ್ರಿಯ ಗೋಚರವಾಗಿರುವ ಪ್ರಸ್ತುತವಾದ ವರ್ತಮಾನವಾದ ಚರಾಚರ ಜಗತ್ತೂ ಹಿಂದಿನಕಲ್ಪಗಳಲ್ಲಿದ್ದ ಹಾಗೂ ಭವಿಷ್ಯದಕಲ್ಪಗಳಲ್ಲಿ ಗೋಚರವಾಗುವ ಚರಾಚರ ಜಗತ್ತೂ ವಿರಾಟ್‌ಸ್ವರೂಪಿಯಾದ ಪರಮೇಶ್ವರನ ಸ್ವಲ್ಪ ಅಂಶ – ಪಾದ ಅಂದರೆ ಕಾಲು ಭಾಗ ಮಾತ್ರ ಇನ್ದ್ರಿಯಾತೀತವೂ ಗುಣಾತೀತವೂ ತ್ರಿಕಾಲಾಬಾಧಿತವೂ ಆಗಿದ್ದು ಉಳಿದ ಮುಕ್ಕಾಲು ಭಾಗವಾದ ಹೆಚ್ಚಿನ ಅಂಶ ಮರಣರಹಿತವೂ ನಾಶರಹಿತವೂ ಶಾಶ್ವತವೂ ಆದ ನಿಜಸ್ಥಿತಿ ಎನಿಸಿರುವ ಅಮೃತತತ್ವವೆಂಬ ಪರಮಪದವಾಗಿದೆ. ಅರ್ಥ ಪುಷ್ಟಿಗಾಗಿ ಈಶ ೧-೨, ೫ ಪ್ರಶ್ನ-೫-೬ ಶ್ವೇ ೫-೨೩ ಬೃ.ಉ ೨-೫-೧ ರಿಂದ ೧೪. ಛಾಂ.ಉ.೩-೧೨-೬- ಬ್ರಸೂ ೧-೧-೨೬ ಭಗೀ ೭-೬, ೭ ಮತ್ತು ೧೦-೪೨ ನೋಡಬಹುದು.

*ಇರ್ಪುದಿರ್ದುದು ಮೇಣ್ಬಂದೆ ಅಪ್ಪುದೆಲ್ಲಮುಮಾತನೇ !*
*ಕಾಲಲ್ತೆ ತೋರುವೀ ಲೋಕಂ ಮುಕ್ಕಾಲವ್ಯಕ್ತಮಚ್ಯುತಂ ॥*

## ಋಕ್ – ೬೨೦

॥ ನಾರಾಯಣಃ ಅನುಷ್ಟುಪ್ ಪುರುಷಃ ॥

೧ ೨ ೩ ೨ಉ ೩ ೧ ೨ ೩ ೧ ೨
**ತಾವಾನಸ್ಯ ಮಹಿಮಾ ತತೋ ಜ್ಯಾಯಾಁಶ್ಚ ಪೂರುಷಃ ।**
೩ ೧ ೨ ೩೧ ೨೦ ೩ ೧ ೨೦ ೩ ೧ ೨
**ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ ॥ ೬-೬೨೦ ॥**

೧ ೨೦ ೩ ೨ ೧೨೦ ೧ ೨೦ ೩ ೧ ೨೦ ೩ ೨ ೩
**ತಾವಾನ್-ಅಸ್ಯ-ಮಹಿಮಾ । ತತಃ-ಜ್ಯಾಯಾನ್-ಚ-ಪುರುಷಃ ॥ ಉತ-ಅ**
೧ ೨ ೩ ೧ ೨ ೧ ೨೦ ೧ ೨೦ ೩ ೧ ೨ ೩
**ಮೃತತ್ವಸ್ಯ-ಅ-ಮೃತತ್ವಸ್ಯ-ಈಶಾನಃ । ಯತ್-ಅನ್ನೇನ-ಅತಿರೋಹತಿ-ಅತಿ-**
೧ ೨೦
**ರೋಹತಿ ॥ ೬-೬೨೦ ॥**

॥ ಪುರುಷವ್ರತಮ್ । ಪುರುಷೋಽನುಷ್ಟುಪ್ಪುರುಷಃ । ಚತುರ್ಥಮ್ ॥

೨೦ ೦ ೦ ೧೦ ೦ ೨ ೧
**೧೩೫.೧. ಹಾಉಹಾಉಹಾಉ । ತಾವಾನಸ್ಯ । ಮಹಾಽ೨೩ಇ**
೨ ೨೦ ೦ ೦ ೧ ೦ ೦ ೦ ೨ ೧೦
**ಮಾಽ೩ ॥ ಹಾಉಹಾಉಹಾಉ । ತತೋಜ್ಯಾಯಾಜ್‌ಶ್ಚಪೂರೂಽ**
೨ ೨೦ ೦ ೦ ೧೦ ೦
**೨೩ಷಾಽ೩ಃ ॥ ಹಾಉಹಾಉಹಾಉ । ಉತಾಮೃತತ್ವಸ್ಯೇಶಾಽ೨೩**

೨ ೨೦ ೦ ೦ ೧ ೦ ೦ ೨೧೦
ನಾऽಹಿಃ ॥ ಹಾಉಹಾಉಹಾಉ । ಯದನ್ನೇನಾತಿರೋऽಹಾऽ೨ಇ
೨ ೨ ೧ ೧
ತೀऽ೩ಹಿ । ಹಾಉಹಾಉಹಾಉ । ವಾऽ೩ಹಿ ॥ ಇಟ್ ಸ್ಥಿ ಇಡಾऽ೨ಇ
೧ ೧
೪೫ ॥ *ದ್ – ೨೩ / ಪ – ೧೨ / ಮಾ – ೧೯ / ಶೋ ॥ ೧೬೨೨೨ ॥*

ಸ್ತೋಭ ಭಾಷ್ಯ – ನನು ಜಗತ್ಸ್ವರೂಪತ್ವೇ ಪಾದಾಪೇಕ್ಷಯಾ ಅನಿತ್ಯತಾ ಪರಮಾತ್ಮನಃ ಪ್ರಸರತೀತ್ಯತ ಉಚ್ಯತೇ – ತಾವಾನಸ್ಯೇತಿ । ಚೈತನ್ಯಮೇವ ಇಚ್ಛಾ ವಶೇನ ವ್ಯೋಮಾದಿರೂಪತಯಾ ವಿಭಾತಿ । ನತು ಅರ್ಥಾನ್ತರಂ ಜಾಯತೇ ವಿನಶ್ಯತಿ ವಾ । ಯಥಾ ಸಂಸಾರಿಪುರುಷಾಣಾಂ ಸನ್ನಿಧಾನೇನ ಜಾಗ್ರತ್ ಸ್ವಪ್ನೇ ಚ ವಿಚಿತ್ರಾಕಾರಾ ಸಂವಿತ್ ಉಪಸಂಹೃತ ಕರಣವ್ಯಾಪಾರಾ ಚ ಕೇವಲಾ ಭವತಿ । ನ ಚ ಏತಾವತಾ ಸ್ವರೂಪಾಪಹಾರಃ । ಏವಂ ವ್ಯೋಮಾದಿ ಆತ್ಮನಾವಸ್ಥಾನಂ ಪರಮೇಶ್ವರಸ್ಯನಾನ್ಯ ಥಾತ್ವಮಿತಿ । ಮಹದಿದಮ್ ಅಚಿನ್ತ್ಯಮೈಶ್ವರ್ಯಂ ಇಚ್ಛಾಮಾತ್ರ ಜನ್ಯಂ ತದುಪ ಸಂಹಾರೇಣ ಚ ದೇಶಕಾಲಾವಚ್ಛಿನ್ನಸ್ಯ ರೂಪಸ್ಯ ಅವಸ್ಥಾನಂ । ಈಶ್ವರೋ ವ್ಯಾಕೃತಾ ವಸ್ಥಾಯಾಂ ಸಂಸಾರಿಣಾಂ ಅಮೃತತ್ವಸ್ಯೇಶಾನಃ ಈಶ್ವರಃ । ಯದಮೃತತ್ವಂ ಅನ್ನೇನ ಅಮೃತಾಖ್ಯೇನ ರಸೇನ ಅತಿರೋಹತಿ ಪ್ರರೋಹಂ ಗಚ್ಛತಿ – ಸ್ಥಿತಿಂ ಬಧ್ನಾತೀತ್ಯರ್ಥಃ । ಈಶ್ವರಾವಸ್ಥಾ ಭೋಕ್ತೃಭೋಗ್ಯಭಾವೇನ ಅವತಿಷ್ಠತೇ ॥

ಜಗತ್ ಸ್ವರೂಪವನ್ನು ತಿಳಿಸಲು ಉಪಯೋಗವಾಗಿರುವ ಪಾದ ಪ್ರಯೋಗ ದಿಂದ ಭಗವಂತನ ಅನಿತ್ಯತ್ವ ಪ್ರಕಟವಾಗಿದೆ ಎಂಬ ಸಂಶಯ ನಿವಾರಣೆಗೆ ತಾವಾನಸ್ಯೇತಿ ಎಂದಿದೆ. ಚೈತನ್ಯವೇ ಸ್ವ ಇಚ್ಛೆಯಿಂದ ಆಕಾಶಾದಿ ಪರಿಚ್ಛಿನ್ನ ರೂಪದಲ್ಲಿ ಭಾಸವಾಗುತ್ತಿದ್ದು ಸಂಸಾರಿ ಪುರುಷನ ಸನ್ನಿಧಾನ ವಿಶೇಷದಿಂದ ಇನ್ದ್ರಿಯಾದಿ ವ್ಯಾಪಾರಗಳೂ ಜನ್ಮಾದಿ ಅವಸ್ಥಾತ್ರಯಗಳೂ ತೋರಿ ಬರುತ್ತಿರುವುದೇ ವಿನಹ ಅದೇನೂ ಸ್ವಸ್ವರೂಪವಲ್ಲ. ಅಮೃತಸ್ವರೂಪವಾದ ಅನ್ನರಸವೇ ಈಶ್ವರನ ವ್ಯಾಕೃತಾವಸ್ಥೆಯ ಸಂಸಾರಾದಿ ಭೋಕ್ತೃ ಭೋಗ್ಯ ರೂಪವಾಗಿದೆ. ಆಕಾಶಾದಿ ಮಹತ್ತತ್ವಗಳೂ ಅವನ ಅಚಿನ್ತ್ಯವಾದ ಮಹದೈಶ್ವರ್ಯವಾಗಿದ್ದು ಇಚ್ಛಾಮಾತ್ರದ ದೇಶಕಾಲಾವಚ್ಛಿನ್ನ ಜಗತ್ ಸ್ವರೂಪವಾಗಿದೆ । ಸಾ ೨೨೨ ॥

ಸಾಯಣ ಬಾಷ್ಯ – ಅತೀತಾನಾಗತವರ್ತಮಾನರೂಪ ಜಗದಾದ್ಯಾಧಾರೋ ಯೋऽಸ್ತಿ ತಾವಾನ್ ಸರ್ವೋऽಪಿ ಅಸ್ಯ ಪುರುಷಸ್ಯ ಮಹಿಮಾ ಸ್ವಕೀಯ ಸಾಮರ್ಥ್ಯ ವಿಶೇಷಃ । ನ ತು ತಸ್ಯ ವಾಸ್ತವಂ ಸ್ವರೂಪಮ್ । ವಾಸ್ತವಸ್ತು ಪುರುಷಃ ತತಃ ಮಹಿಮ್ನೋऽಪಿ ಜ್ಯಾಯಾನ್ ಅತಿಶಯೇನಾಧಿಕಃ ಇತ್ಯರ್ಥಃ । ಉತ ಅಪಿ ಚ ಅಮೃತತ್ವಸ್ಯ ದೇವತ್ವಸ್ಯ ಅಯಮೀಶಾನಃ ಸ್ವಮಾಯಾಯಾ ಯತ್ ಯಸ್ಮಾತ್ ಕಾರಣಾತ್ ಅನ್ನೇನ ಪ್ರಾಣಿನಾಂ ಭೋಗ್ಯೇನ ಅನ್ನೇನ ನಿಮಿತ್ತಭೂತೇನ ಅತಿರೋಹತಿ ಸ್ವಕೀಯಾಂ ಕಾರಣಾವಸ್ಥಾಮತಿಕ್ರಮ್ಯ ಪರಿದೃಶ್ಯಮಾನಜಗದವಸ್ಥಾಂ ಪ್ರಾಪ್ನೋತಿ ।

ತಸ್ಮಾತ್ ಪ್ರಾಣಿನಾಂ ಕರ್ಮಫಲಭೋಗಾಯ ಜಗದವಸ್ಥಾಸ್ವೀಕಾರಾತ್ ನೇದಂ ತಸ್ಯ ವಸ್ತುತತ್ತ್ವಮಿತ್ಯರ್ಥಃ ॥

**ತಾವಾನಸ್ಯ** ಭೂತ ಭವಿಷ್ಯತ್ ವರ್ತಮಾನವೆಂಬ ತ್ರಿಕಾಲಗಳಲ್ಲೂ ನಡೆಯುವ ಸೃಷ್ಟಿ ಸ್ಥಿತಿ ಲಯ ರೂಪೀ ಸಮಸ್ತ ಚೇತನಾಚೇತನ ಜಗದ್ವ್ಯವಹಾರಗಳಿಗೂ ಆಧಾರನಾದ **ಅಸ್ಯ** ಈ ಪರಪುರುಷನ **ಮಹಿಮಾ** ಸಾಮರ್ಥ್ಯವಾದ ವಿಭೂತಿ ವಿಶೇಷವೇ ಆಗಿದ್ದು ಅವನ ಮಹಾಮಹಿಮೆಯನ್ನು ಸೂಚಿಸುತ್ತದೆ **ಚ** ಅಲ್ಲದೆ **ಪುರುಷಃ** ಆ ಪರಮ ಪುರುಷನು **ತತಃ** ಈ ಮಹಾಮಹಿಮಾನ್ವಿತ ಜಗತ್ ಸ್ವರೂಪಕ್ಕಿಂತಲೂ **ಜ್ಯಾಯಾನ್** ಅತ್ಯಧಿಕ ಸ್ವರೂಪದವನಾಗಿದ್ದೂ ಇನ್ದ್ರಿಯಾತೀತನಾಗಿ ಸತ್ಯಕ್ಕಿಂತಲೂ ಮೀರಿದ ಸತ್ಯಾತ್ಮಕನಾಗಿದ್ದಾನೆ. **ಉತ** ಮತ್ತು **ಅಮೃತತ್ವಸ್ಯ ಈಶಾನಃ** ಅಮೃತಪುತ್ರರ ದೇವತೆಗಳ ಪ್ರಭುವೂ ಅನಾದ್ಯನಂತನೂ ಮರಣರಹಿತನೂ ನಾಶರಹಿತನೂ ಅಕ್ಷರ ಶಬ್ದವಾಚ್ಯನೂ ಆಗಿದ್ದಾನೆ. **ಯತ್** ಏಕೆಂದರೆ ಯಾವ ನಿಮಿತ್ತವಾಗಿ **ಅನ್ನೇನಾತಿರೋಹತಿ** ಭೋಗ ಸಾಧನವಾದ ಕರ್ಮಫಲಸಂಜ್ಞಕವಾದ ಐಹಿಕ ಆಮುಷ್ಮಿಕ ಪ್ರಪಂಚವೆಂಬ ಜಗದ್ರೂಪವಾದ ಕಾರ್ಯ ಸ್ಥಿತಿಯನ್ನು ಪಡೆದು ಅನ್ನಂಬ್ರಹ್ಮ ಎಂದೆನಿಸಿಕೊಂಡು ಕಾರಣಾವಸ್ಥೆಯನ್ನು ಅತಿಕ್ರಮಿಸಿರುತ್ತಾನೆ ತ್ಯಜಿಸಿರುತ್ತಾನೆ.

ತ್ರಿಕಾಲಗಳ ರೂಪವಾದ ಈ ಸಮಸ್ತ ಜಗತ್ತೂ ಈ ಪರಮಪುರುಷನ ಮಹಿಮೆಯೇ ಸಾಮರ್ಥ್ಯ ವಿಶೇಷವೇ ಆಗಿರುವುದಾದರೂ ಆ ಪರಮಪುರುಷನು ಈ ಮಹಾಮಹಿಮಾನ್ವಿತ ಜಗತ್ತಿನ ಮೂರರರಷ್ಟಕ್ಕಿಂತಲೂ ಅಧಿಕನಾಗಿದ್ದೂ ಇನ್ದ್ರಿಯಾ ತೀತನಾಗಿ ಸತ್ಯಕ್ಕಿಂತಲೂ ಮೀರಿದ ಸತ್ಯಾತ್ಮಕನಾಗಿದ್ದಾನೆ. ಇದೂ ಅಲ್ಲದೆ ದೇವತೆಗಳ ಪ್ರಭುವೂ ಅನಾದ್ಯನಂತನೂ ನಾಶರಹಿತನೂ ಅಕ್ಷರಶಬ್ದವಾಚ್ಯನೂ ಆಗಿದ್ದಾನೆ. ಜೀವಿಗಳ ಕರ್ಮಫಲಸಂಜ್ಞಿಕ ಭೋಗಸಾಧನವಾದ ಅನ್ನದಿಂದ ಬೆಳೆಯುವಂತೆ ತೋರಿಸಿಕೊಂಡು ಕಾರಣಾವಸ್ಥೆಯನ್ನತಿಕ್ರಮಿಸಿ ಅನ್ನಂಬ್ರಹ್ಮನೆನಿಸಿ ಕಾಣಿಸಿಕೊಳ್ಳುವುದಕ್ಕಿಂತಲೂ ಅಧಿಕ ಮಹಾಮಹಿಮನಾಗಿದ್ದಾನೆ. ಅರ್ಥಪುಷ್ಟಿಗಾಗಿ – ಬ್ರ ಸೂ ೧–೧–೨೬ ಈಶ – ೫ ಕಠ ೩–೧೧ ಪ್ರಶ್ನ ೫–೨–೩ ಮುಂ ೧–೧–೫, ೬, ೨–೧–೧ ೨–೨–೫ ತೈ ೨–೧ ಛಾಂ ೩–೧೨–೬, ೮–೪–೧, ೨ ಬೃ.ಉ ೨–೩–೧, ೨–೧–೨ ೩–೮ ರಿಂದ ೧೧ ೫– ೧–೨ ಶ್ವೇ ೫–೧, ೩–೧೭ ಭಗೀ ೧೦–೪೨, ೧೩–೧೫.

*ಇಂತೆನಲ್ಕಾತನೊಳ್ಪಂ ನಾಂ; ಮಿಗಿಲ್ ಮೇಣದರಿಂದವಂ ।*
*ಸ್ವಾಮಿಯಾತಂ ಜಗಜ್ಜೀವಾಮೃತಪುಷ್ಟಿಸ್ಥಿತೀಷ್ಟಿಗಂ ॥*

॥ ನಾರಾಯಣಃ ಅನುಷ್ಟುಪ್ ಸ್ರಷ್ಟಾ ಪುರುಷಃ ॥

೧ ೨ ೩ ೧ ೨ ೩ ೨ ೩ ೨ ೩ ೧ ೨ ೨ ೩ ೧

**ತತೋ ವಿರಾಡಜಾಯತ ವಿರಾಜೋ ಅಧಿ ಪೂರುಷಃ । ಸ ಜಾತೋ**

೨೦ ೩ ೨ಉ ೩ ೧ ೨ ೩ ೨

**ಅತ್ಯರಿಚ್ಯತ ಪಶ್ಚಾದ್ ಭೂಮಿಮಥೋ ಪುರಃ ॥ ೭-೬೨೧ ॥**

೧೨೦ ೩ ೨ ೩ ೨ ೩ ೧ ೨ ೩ ೧ ೨೦ ೧೨೦ ೧ ೨೦

**ತತಃ–ವಿರಾಟ್–ವಿ–ರಾಟ್–ಅಜಾಯತ । ವಿರಾಜಃ–ವಿ–ರಾಜಃ–ಅಧಿ–ಪುರು**

೩ ೨ ೧೨೦ ೩ ೨ ೧ ೨೦ ೧೨೦ ೩ ೨

**ಷಃ ॥ ಸಃ–ಜಾತಃ–ಅತಿ–ಅರಿಚ್ಯತ । ಪಶ್ಚಾತ್–ಭೂಮಿಮ್–ಅಥ–ಉ–ಪುರಃ**

॥ ೭-೬೨೧ ॥

॥ ಪುರುಷವ್ರತಮ್ । ಪುರುಷೋಽನುಷ್ಟುಪ್ಪುರುಷಃ । ಪಂಚಮಮ್ ॥

೨ ೧ ೦ ೨ ೧೦ ೨೦

**೧೩೬.೧. ಹಾಉಹಾಉಹಾಉವಾ । ತತೋವಿರಾಡಜಾಯತ ॥**

೨ ೧೦೨೦ ೧ ೨೧೦ ೨ ೨

**ಹಾಉಹಾಉಹಾಉವಾ । ವಿರಾಜೋಅಧಿಪೂರುಷಃ ॥ ಹಾಉ**

೧ ೨೦ ೧೦ ೨ ೨

**ಹಾಉಹಾಉವಾ । ಸಜಾತೋಅತ್ಯರಿಚ್ಯತ ॥ ಹಾಉಹಾಉಹಾ**

೧೦ ೦ ೨ ೧ ೦ ೨ ೧ ೨

**ಉವಾ । ಪಶ್ಚಾದ್ಭೂಮಿಮಥೋಪುರಃ । ಹಾಉಹಾಉಹಾಉ**

೧ ೧ ೧ ೧

**ವಾಽ೩ ॥ ಇಟ್ ಸ್ಥಿ ಇಡಾಽ೨೩೪೫ ॥**

*ದೀ – ೧೧ । ಪ – ೧೦ । ಮಾ – ೧೯ । ಜ್ಯೋ ॥ ೧೭.೨೨೩ ॥*

ಸ್ತೋಭ ಭಾಷ್ಯ –ಕೇನ ಕ್ರಮೇಣ ಜಗದಾತ್ಮತಾ ಪರಮೇಶ್ವರಸ್ಯ ಇತಿ । ಅತ ಉಚ್ಯತೇ – ತತ ಇತಿ ಪ್ರಥಮಂ ಪರಮಾತ್ಮನೋ ವ್ಯೋಮಾದಿ ಭೂತ ಪಂಚಕಂ ಜಾಯತೇ । ತತಃ ತೇಜ ಉದಕ ಕ್ಷಿತೀನಾಂ ಮಿಶ್ರೀಭಾವಾದಂಡನಿರ್ವೃತ್ತಿಃ । ಅನನ್ತರಂ ದ್ವಿಧಾಗತೇ ಅಂಡೇ ದ್ಯೌಃ ಪೃಥಿವೀ ಚ ಸಂಪದ್ಯತೇ । ತಯೋರ್ಮಧ್ಯೇ ವಿರಾಟ್

ತ್ರೈಲೋಕ್ಯಾಭಿಮಾನೀ ಜಾಯತೇ ಯಸ್ಯ ಪ್ರಥಮಜೋ ಬ್ರಹ್ಮಾ ಹಿರಣ್ಯಗರ್ಭಃ ಆದಿತ್ಯ ಇತಿ ಪರ್ಯಾಯಾಃ । ವಿರಾಜಃ ಅನನ್ತರಂ ಪುರುಷಃ ಮನು ಶಬ್ದವಾಚ್ಯಃ ಜಾಯತೇ । ಸಃ ಮನುಸಂಜ್ಞಕಃ ಪ್ರಜಾಪತಿಃ ಅತಿರಿಚ್ಯತೇ ಸ್ಥೂಲ ಶರೀರ ಪರಿಗ್ರಹಂ ಕೃತ್ವಾ ಗೌರೀಶ್ವರರೂಪೋ ಮಿಥುನಧರ್ಮೇಣ ದೇವಮಾನುಷ ಪಶ್ವಾದಿ ಪಿಪೀಲಿಕಾನ್ತಂ ಸಿಸೃಕ್ಷುಃ । ಪಶ್ಚಾತ್ ಭೂಮಿಂ ಬ್ರಹ್ಮಾದಿ ಸ್ಥಾವರಾನ್ತಸ್ಯ ಉಪಭೋಗಸ್ಥಾನಂ ಕಲ್ಪಯಿತ್ವಾ ಅನನ್ತರಂ ಲಿಂಗಶರೀರಯುಕ್ತಾನ್ ದೇವಾದೀನ್ ಉತ್ಪಾದಿತವಾನ್ ಇತ್ಯೇವಮುತ್ಪತ್ತಿ ಕ್ರಮೋ ಬ್ರಹ್ಮಣಃ । ಸಾ ೨೨೩ ॥

ಭಗವಂತನು ಜಗದಾತ್ಮನಾಗಿ ರೂಪಗೊಂಡ ಬಗೆಯನ್ನು ವಿವರಿಸಲಾಗಿದೆ. ಮೊದಲು ಆಕಾಶಾದಿ ಪಂಚಭೂತಾತ್ಮಕವಾಗಿ ನಂತರ ತೇಜಸ್ಸು ನೀರು ಮಣ್ಣುಗಳ ಮಿಶ್ರಣದಿಂದ ದ್ಯುಲೋಕ ಪೃಥ್ವೀಲೋಕಗಳಾದವು. ಇವೆರಡರ ಮಧ್ಯೆ ತ್ರೈಲೋಕ್ಯಾ ಭಿಮಾನೀ ವಿರಾಟ್‌ನಿಂದ ಬ್ರಹ್ಮ ಹಿರಣ್ಯಗರ್ಭ ಆದಿತ್ಯರು ಪರ್ಯಾಯವಾಗಿ ರೂಪ ಗೊಂಡರು. ನಂತರ ಮನುಪ್ರಜಾಪತಿ ವಾಚ್ಯನಾದ ಪುರುಷನು ಸ್ಥೂಲ ಶರೀರವನ್ನು ಪರಿಗ್ರಹಿಸಿ ಗೌರೀಶಂಕರರು ಸಂಕೇತಿಸುವ ಮಿಥುನ ಧರ್ಮದಿಂದ ದೇವ ಮನುಷ್ಯ ಪಶುಕೀಟಾದಿಗಳೂ ಇವುಗಳ ಉಪಭೋಗ ಸ್ಥಾನವಾಗಿ ಪೃಥ್ವಿಯೂ ಲಿಂಗಶರೀರಗಳೂ ರೂಪಗೊಂಡವು । ಸಾ ೨೨೩ ॥

ವಿಷ್ವಙ್ ವ್ಯಕ್ರಾಮತ್ ಋ೬೧೮ ಇತಿ ಯದುಕ್ತಂ ತದೇವ ಅತ್ರ ಪ್ರಪಞ್ಚ್ಯತೇ। ತತಃ ತಸ್ಮಾದಾದಿಪುರುಷಾತ್ ವಿರಾಟ್ ಬ್ರಹ್ಮಾಣ್ಡದೇಹಃ ಅಜಾಯತ ಉತ್ಪನ್ನಃ । ವಿವಿಧಾನಿ ರಾಜನ್ತೇ ವಸ್ತೂನ್ಯತ್ರೇತಿ ವಿರಾಟ್ । ವಿರಾಜೋಽಧಿ ವಿರಾಡ್ ದೇಹಸ್ಯೋಪರಿ ತಮೇವ ದೇಹಮಧಿಕರಣಂ ಕೃತ್ವಾ ಪುರುಷಃ ತದ್ದೇಹಾಭಿಮಾನೀ । ಕಶ್ಚಿತ್ ಪುಮಾನಜಾಯತ । ಯೋಽಯಂ ಸರ್ವವೇದಾನ್ತ ವೇದ್ಯಃ ಪರಮಾತ್ಮಾ ಸ ಏವ ಸ್ವಕೀಯಯಾ ಮಾಯಯಾ ವಿರಾಡ್ ದೇಹಂ ಬ್ರಹ್ಮಾಣ್ಡರೂಪಂ ಸೃಷ್ಟ್ವಾ ತತ್ರ ಜೀವರೂಪೇಣ ಪ್ರವಿಶ್ಯ ಬ್ರಹ್ಮಾಣ್ಡಾಭಿಮಾನೀ ದೇವತಾತ್ಮಾ ಜೀವೋಽಭವತ್ । ಏತಚ್ಚಾಥರ್ವಣಿಕಾ ಉತ್ತರ ತಾಪನೀಯೇ ವಿಸ್ಪಷ್ಟಮಾಮನನ್ತಿ - ಸ ವಾ ಏಷ ಭೂತಾನೀನ್ದ್ರಿಯಾಣಿ ವಿರಾಜಂ ದೇವತಾಃ ಕೋಶಾಂಶ್ಚ ಸೃಷ್ಟ್ವಾ । ಪ್ರವಿಶ್ಯ ಮೂಢೋ ಮೂಢ ಇವ ವ್ಯವಹಾರನ್ನಾಸ್ತೇ ಮಾಯಾಯೈವೇತಿ । ೨-೧-೧ । ಸ ಜಾತಃ ವಿರಾಟ್ ಪುರುಷಃ ಅತ್ಯರಿಚ್ಯತ ಅತಿರಿಕ್ತೋಽಭೂತ್ । ವಿರಾಡ್ವ್ಯತಿರಿಕ್ತೋ ದೇವ ತಿರ್ಯ್ಯಙ್ ಮನುಷ್ಯಾದಿರೂಪೋಽಭವತ್ । ಪಶ್ಚಾದ್ದೇವಾದಿಜೀವಭಾವಾದೂರ್ಧ್ವಂ ಭೂಮಿಂ ಸಸರ್ಜೇತಿ ಶೇಷಃ । ಅಥೋ ಭೂಮಿ ಸೃಷ್ಟೇರನನ್ತರಂ ತೇಷಾಂ ಜೀವಾನಾಂ ಪುರಃ ಸಸರ್ಜ - ಪೂರ್ಯನ್ತೇ ಸಪ್ತಾಭಿರ್ಧಾತುಭಿರಿತಿ ಪುರಃ ಶರೀರಾಣಿ ॥

ತತಃ ನಿಮಿತ್ತಕಾರಣನಾದ ಆದಿಪುರುಷನಿಂದ **ವಿರಾಟ್** ಬಹುವಿಧ ಚರಾಚರ ರೂಪಗಳಿಂದ ವಿಜೃಂಭಿಸುತ್ತಿರುವ ಬ್ರಹ್ಮಾಂಡವು-ವಿರಾಟ್ ವಿವಿಧಾನಿ ರಾಜಂತಿ ಇತಿ ವಿರಾಟ್ । **ಅಜಾಯತ** ಉತ್ಪನ್ನವಾಯಿತು. ಅವತರಿಸಿತು **ವಿರಾಜೋ ಅಧಿ** ಈ ಬಹು ದೊಡ್ಡದಾದ ಬ್ರಹ್ಮಾಂಡವನ್ನು ವಿರಾಟ್‌ದೇಹವನ್ನು ಆಶ್ರಯಿಸಿ ಪ್ರವೇಶಿಸಿ **ಪುರುಷಃ**

ಉಪನಿಷದ್ವೇದ್ಯನಾದ ಪುರುಷನೇ ಬ್ರಹ್ಮಾಂಡದ ಅಭಿಮಾನೀ ದೇವತೆಯಾದ ಜೀವ ರೂಪವನ್ನು ತಳೆದನು. ಅಂದರೆ ಅವ್ಯಕ್ತದಿಂದ ವ್ಯಕ್ತವು ಉದ್ಭವಿಸಿತು. **ಪಶ್ಚಾತ್** ಅನಂತರ **ಸ ಜಾತಃ** ವಿವಿಧ ಚೇತನಾಚೇತನ ರೂಪದಲ್ಲಿ ಅವತರಿಸಿ ಕಾಣಿಸಿಕೊಂಡ ಆ ಪರಮಪುರುಷನು **ಅತ್ಯರಿಚ್ಯತ** ತನಗಿಂತಲೂ ಬೇರೆಯಾದ ದೇವತೆ ಮನುಷ್ಯ ಪಶು ಪಕ್ಷಿಗಳಾದಿರೂಪಗಳನ್ನು ಧರಿಸಿದನು ಸೃಷ್ಟಿಸಿದನು. **ಪಶ್ಚಾತ್** ಅನಂತರ ಅವುಗಳು ವಾಸಮಾಡಲು **ಭೂಮಿಂ** ಭೂಮಿಸಂಕೇತವಾದ ಸಮಸ್ತ ಲೋಕಗಳನ್ನೂ ಪರ್ವತ ನದಿ ಸಮುದ್ರ ವನೌಷಧಿಗಳೆಲ್ಲವನ್ನೂ **ಅಥ** ಅನಂತರ **ಪುರಃ** ಸೃಷ್ಟಿಯಾದ ಸಮಸ್ತಕ್ಕೂ ಅವುಗಳಿಗೆ ಅನುರೂಪವಾದ ಪಾಂಚ ಭೌತಿಕವಾದ ಶರೀರಾದಿಗಳನ್ನು ಸೃಷ್ಟಿಸಿದನು.

ನಿಮಿತ್ತ ಕಾರಣನಾದ ಪರಮಪುರುಷನಿಂದ ಚರಾಚರಾತ್ಮಕವಾದ ಅನೇಕ ರೂಪಗಳಲ್ಲಿ ವಿಜೃಂಭಿಸುತ್ತಿರುವ ಬ್ರಹ್ಮಾಂಡವು ಉತ್ಪನ್ನವಾಯಿತು. ಈ ಬ್ರಹ್ಮಾಂಡ ವನ್ನಾಶ್ರಯಿಸಿಯೇ ಪ್ರವೇಶಿಸಿಯೇ ಉಪನಿಷದ್ವೇದ್ಯನಾದ ಪರಮ ಪುರುಷನು ಬ್ರಹ್ಮಾಂಡದ ಅಭಿಮಾನದೇವತೆಯಾಗಿ ಜೀವರೂಪವನ್ನು ತಳೆದನು. ಅನಂತರ ಚೇತನಾಚೇತನಾದಿ ಸ್ವರೂಪದಲ್ಲಿ ಕಾಣಿಸಿಕೊಂಡು ತನಗಿಂತಲೂ ಬೇರೆಯೇ ಆದ ದೇವತಾ ಮನುಷ್ಯ ಪಶುಪಕ್ಷಿಗಳಾದಿ ರೂಪಗಳನ್ನುಧರಿಸಿ ಅವುಗಳ ವಾಸಕ್ಕನುಕೂಲ ವಾಗುವಂತೆ ಭೂಮಿ ಆದಿ ಸಮಸ್ತಲೋಕಗಳನ್ನೂ ಸೃಷ್ಟಿಸಿ ಪಾಂಚಭೌತಿಕವಾದ ವಾಸನಾರೂಪೀ ಭೋಗಶರೀರಗಳನ್ನೂ ರೂಪಿಸಿದನು.

*ಪೋಣ್ಕೆದತ್ತಾತನಿಂದೆಲ್ಲಂ ವಿರಾಡೆಂಬುದುಮಂತೆಯೇ ।*
*ಅದುವೇ ಜಗಮೆಂದಾಯ್ತು ಜೀವಮೆಂದಾದುದಂತೆಯೇ ॥*

ಸ್ತೋಭ ಪದಪಾಠ : ಅಸ್ಮಿನ್–ನೃಮ್ಣೇನೃಮ್ಣಮ್–ನೃಮ್ಣೇ–ನೃಮ್ಣಮ್ । ನಿ–ಧೀಮಹೇ ॥

॥ ಪುರುಷವ್ರತಮ್ । ಪಂಚಾನುಗಾನಂಚೈಕಾನುಗಾನಂಚ । ಪುರುಷೋ ಗಾಯತ್ರೀಶ್ವರ ಪುರುಷಃ ವಿಶ್ವೇ ದೇವಾ ವಾ ॥ ಇದಂ ದ್ವಿತೀಯಂ ಏಕಾನುಗಾನಮ್ ॥

**೧೩೭.೧. ಹಾಉಹಾಉಹಾಉ । ಅಸ್ಮೀನಸ್ಮಿನ್ । ೩ । ನೃಮ್ಣಾಇ ನೃಮ್ಣಮ್ । ೩ । ನಿಧಾಇಮಾಹೇ । ೩ । ಕಯಾನಶ್ಚಿತ್ರsಆಭೂs ೧ವಾs೨ಇತ್ ॥ ಊತೀಸದಾವೃs೩ಧಾಃಸಾs೧ಖಾs೨ ॥ ಕಯಾ ಶಚಿಷ್ಠs೩ಯಾವಾs೧ರ್ತಾs೨೩ ॥ ಹಾಉಹಾಉಹಾಉ । ಅಸ್ಮೀ ನಸ್ಮಿನ್ । ೩ । ನೃಮ್ಣಾಇನೃಮ್ಣಮ್ । ೩ । ನಿಧಾಇಮಾಹೇ । ೨ ।**

೧ ೧ ^ ೩ ೫೦ ೦ ೧
ನಿಧಾ೨೩ಇ । ಮಾ೨ । ಹಾ೨೩ಳ । ಔಹೋವಾ ॥ ಸುವ
೦ ೩ ೧೧೧
ರ್ಜ್ಯೋತೀ೨೩ಳಚಿಃ ॥

*ದೀ - ೧೪ । ಪ - ೨೭ । ಮಾ - ೩೩ । ಥಿ ॥ ೧೮.೨೨೪ ॥*

ಈ ೨೨೪ನೆಯ ಸಾಮಗಾನವು ಕಯಾನಶ್ಚಿತ್ರ ಆಭುವತ್ ೧೬೯ನೆಯ ಋಕ್ ಮೇಲೆ ಅಧಿಷ್ಠಿತವಾಗಿದೆ.

ಸ್ತೋಭ ಭಾಷ್ಯ - ಪರಮೇಶ್ವರೋ ಜಗತಿ ಕಥಂ ಸ್ಥಿತಿಂ ಕರೋತೀತಿ ಉಚ್ಯತೇ - ಕಯಾ ಏಕಯಾ ತನ್ವಾ ನೋ ಅಸ್ಮಾಕಂ ಯಾಗಾದೌ ಚಿತ್ರ ಆಭುವತ್ ಯುಗಪತ್ ಅನೇಕರೂಪ ಪರಿಗ್ರಹೇಣ ಅಧಿಕಾರಿಣಾಂ ಆವಿರ್ಭವತಿ । ಹವಿರಾದಿ ಪರಿಗ್ರಹಾರ್ಥಂ ಸದಾವೃಧಃ ಸ್ತುತ್ಯಾದಿನಾ ಸದಾ ವರ್ಧಯಿತುಃ ಉತ್ಕರ್ಷೇ ಅವಸ್ಥಾಪಯಿತು: ಯಜಮಾನಸ್ಯ ಸಖಿಭೂತಃ । ಕಯಾ ಪರಯಾ ತನ್ವಾ ಶಚಿಷ್ಠಯಾ ಸತ್ಕೃತತಮಯಾ ವೃತಾ ವರ್ತನಹೇತುಭೂತಯಾ ದೃಷ್ಟಫಲಾದಿದಾನೇನ ಊತೀ ಪಾಲಯಿತಾ ಭವತಿ । ದೇವರ್ಷಿ ಪಿತೃರೂಪೇಣ ಹವಿರಾದಿಭುಜಕ್ತೇ ಫಲೇನ ಚ ಯೋಜಯತಿ ಪರಮೇಶ್ವರ ಇತ್ಯರ್ಥಃ । ಅಸ್ಮಿನ್ ನೃಮ್ಣೇ ಬಲೋಪಲಕ್ಷಿತೇ ಭೋಕ್ತಾರನೃಮ್ಣಂ ಅನ್ನಂ ಹವಿರಾದಿ ನಿಧೀಮಹೇ ಸಮರ್ಪಯಾಮಃ । ಇತಿ ಸ್ತೋಭಪದನಾಂ ಋಗರ್ಥಾನುಗತೋರ್ಥಃ ॥ ಸಾಮ ೨೨೪ ॥

ಭಗವಂತನು ಜಗತ್ತಿನ ಸ್ಥಿತಿಗತಿ ಆದಿವ್ಯವಸ್ಥೆಯನ್ನು ರೂಪಿಸಿರುವ ಬಗೆ ಹೀಗಿದೆ. ನಾವು ಅನುಷ್ಠಾನಮಾಡುವ ಯಜ್ಞಯಾಗಾದಿಗಳಲ್ಲಿ ಭಗವಂತನು ಬಗೆಬಗೆಯ ಅಧಿಕಾರ ರೂಪವನ್ನುತಳೆದು ಸ್ತುತ್ಯಾದಿಗಳಿಂದ ವರ್ಧಿಸುತ್ತಾ ಹವಿರಾದಿಗಳನ್ನು ಪರಿಗ್ರಹಿಸಿ ದೇವ ಋಷಿ ಪಿತೃ ರೂಪಗಳಲ್ಲಿ ಭುಂಜಿಸಿ ಯಜಮಾನನ ಹಿತೈಷಿಯಾಗಿ ದೃಷ್ಟ ಫಲಗಳನ್ನು ಅನುಗ್ರಹಿಸುತ್ತಾ ಪಾಲಿಸುತ್ತಾನೆ. ಫಲಬಲಾಪೇಕ್ಷಿಗಳಾದ ನಾವು ಭೋಕ್ತೃಗಳಿಗೆ ಅನ್ನಾದಿ ಹವಿಸ್ಸುಗಳನ್ನು ಅರ್ಪಿಸುತ್ತಿರುತ್ತೇವೆ.

## ಋಕ್ - ೬೨೨

॥ ವಾಮದೇವೋ ಗೌತಮಃ ತ್ರಿಷ್ಟುಪ್ ದ್ಯಾವಾಪೃಥಿವೀ ॥

೧ ೨ ೩ ೧ ೨ ೩ ೧ ೨೦ ೩ ೧
ಮನ್ಯೇ ವಾಂ ದ್ಯಾವಾಪೃಥಿವೀ ಸುಭೋಜಸೌ ಯೇ ಅಪ್ರಥೇಥಾಮ
೨ ೩ ೧ ೨೦ ೧ ೨ ೩ ೧ ೨ ೩ ೧
ಮಿತಮಭಿ ಯೋಜನಮ್ । ದ್ಯಾವಾಪೃಥಿವೀ ಭವತಂ ಸ್ಯೋನೇ

೨೦ ೩ ೧ ೨
ತೇ ನೋ ಮುಞ್ಚತಮಂ\ಹಸಃ ॥ ೮-೬೨೨ ॥

೧ ೨೦ ೩ ೧ ೨ ೩ ೧ ೨ ೩
ಮನ್ಯೇ-ವಾಮ್-ದ್ಯಾವಾಪೃಥಿವೀ-ದ್ಯಾವಾ-ಪೃಥಿವೀ-ಇತಿ-ಸುಭೋಜಸೌ-ಸು
೧ ೨೦ ೧ ೨ ೧೨೦ ೧೨೦ ೩
-ಭೋಜಸೌ । ಯೇ-ಇತಿ-ಅಪ್ರಥೇಥಾಮ್-ಅಮಿತಮ್-ಅ-ಮಿತಮ್ -ಅ
೨ ೧ ೨೦ ೧ ೨೦ ೧ ೨೦ ೩ ೧ ೨ ೧೨೦
ಭಿ-ಯೋಜನಮ್ ॥ ದ್ಯಾವಾಪೃಥಿವೀ-ದ್ಯಾವಾ-ಪೃಥಿವೀ-ಇತಿ-ಭವತಮ್-
೩ ೧ ೨ ೧ ೨ ೩ ೧ ೨೦
ಸ್ಯೋನೇ-ಇತಿ । ತೇ-ಇತಿ-ನಃ-ಮುಞ್ಚತಮ್-ಅಂ\ಹಸಃ ॥

॥ ದ್ಯಾವ್ರ್ರತಮ್ । ದ್ಯೌಃ ಜ್ಯೋತಿಷ್ಮತೀ ಜಗತೀ ದ್ಯಾವಾಪೃಥಿವ್ಯೌ ॥

೧ ೨೦ ೧ ೨ ೦ ೦ ೦ ೦
೧೩೮.೧. ಹುವಾಇ । ೩ । ರೂಪಮ್ । ಮನ್ಯೇವಾಂದ್ಯಾವಾಪೃಥಿ
೦ ೧ ೨ — ೦ ೦ ೦
ವೀಸುಽ೩ಭೋಜಾಽ೧ಸಾಽ೨ಉ ॥ ಯೇಅಪ್ರಥೇಥಾಮಮಿತಮಭಿಽ
೧ ೨ — ೦ ೦ ೦ ೧ ೨
೩ಯೋಜಾಽ೧ನಾಽ೨ಮ್ ॥ ದ್ಯಾವಾಪೃಥಿವೀಭವಽ೩ತಾಂ\ಸ್ಯೋಽ
— ೦ ೦ ೧ ೨ — ೧
೧ನಾಽ೨ಇ ॥ ತೇನೋಮುಞ್ಚತಽ೩ಮಾಂ\ಹಾಽ೧ಸಾಽ೨ಃ । ಹು
೨೦ ೧ ^ ೩ ೫೦ ೦ ೨೦ ೦
ವಾಇ । ೩ । ರೂಪಾಽ೨ । ವಾಽ೨೩೪ಔಹೋವಾ ॥ ಏ । ರೂ
೧
ಪಮ್ । ೨-೩ ॥

*ದೀ - ೨೩ / ಪ - ೧೯ / ಮಾ - ೧೬ / ಥೂ ॥ ೧೯.೨೨೫ ॥*

ಸ್ತೋಭ ಭಾಷ್ಯ - ಹೇ ದ್ಯಾವಾ ಪೃಥಿವ್ಯೌ ಸುಭೋಜಸೌ ಮಹಾಬಲೇ ವಾಂ ಯುವಾಂ ಮನ್ಯೇ । ಯೇ ಭವತ್ಯೌ ಯೋಜನಂ ಅಮಿತಂ ಅಪರಿಮಿತಂ ಅಭ್ಯಪ್ರಥೇಥಾಂ ಆತ್ಮಾನಂ ವಿಸ್ತಾರಯತಂ । ದ್ಯಾವಾಪೃಥಿವ್ಯೌ ಸ್ಯೋನೇ ಸುಖಾಯ ಭವತಂ ತೇ ಭವತ್ಯೌ ನಃ ಅಸ್ಮಾನ್ ಅಂ\ಹಸಃ ಪಾಪಾತ್ ಮುಞ್ಚತಂ ಭವತ್ಯೋಃ ಪ್ರಸಾದಾತ್ ಶುದ್ಧಂ ರೂಪಂ ಹುವೇ ಆಹ್ವಯಾಮಿ ಗೃಹ್ಣಾಮಿ ॥ ಸಾ ೨೨೫ ॥

ಮಹಾಬಲಶಾಲಿಗಳಾದ ದ್ಯಾವಾಪೃಥಿವೀ ದೇವತೆಗಳೇ ತಾವು ಒಳ್ಳೆಯ ಭೋಜನ ಸಂಕೇತವಾದ ಭೋಗ ಭಾಗ್ಯಗಳನ್ನಿತ್ತು ಪಾಲಿಸುತ್ತಿರುವಿರೆಂದು ಮನಃ ಪೂರ್ವಕವಾಗಿ ತಿಳಿದಿದ್ದೇವೆ. ತಾವುಗಳು ಅಪರಿಮಿತವಾದ ಲೌಕಿಕ ಮತ್ತು ಆಧ್ಯಾತ್ಮಿಕ ಐಶ್ವರ್ಯಗಳನ್ನು ಅನುಗ್ರಹಿಸಿ ನಮ್ಮನ್ನು ವಿಶಾಲ ಹೃದಯಿಗಳಾಗಿರುವಂತೆಯೂ ಅತ್ಯಂತ ಸುಖಿಗಳಾಗಿರುವಂತೆಯೂ ರೂಪಿಸಿ. ತಾವುಗಳು ನಮ್ಮನ್ನು ಸಮಸ್ತವಾದ ಪಾಪಗಳಿಂದಲೂ ಬಿಡುಗಡೆಮಾಡಿ ಶುದ್ಧರೂಪವನ್ನು ಪಡೆಯಲುಬೇಕಾದ ಅನುಕೂಲ ಗಳನ್ನನುಗ್ರಹಿಸಿ । ಸಾ ೨೨೫ ॥

ಹೇ **ದ್ಯಾವಾಪೃಥಿವೀ** ದ್ಯಾವಾಪೃಥಿವ್ಯೌ **ವಾಂ** ಯುವಾಂ **ಸುಭೋಜಸೌ** । ಶೋಭನಪಾಲಯಿತ್ರ್ಯಾವಿತಿ **ಮನ್ಯೇ** ಅಹಂ ಜಾನಾಮಿ । ಹೇ ದ್ಯಾವಾಪೃಥಿವ್ಯೌ **ಅಮಿತಮ್** ಅಪರಿಮಿತಂ **ಯೋಜನಮ್** । ಯುಜ್ಯತೇ ಪುರು ಷೋಽನೇನೇತಿ ಯೋಜನಮ್ । ಧನಾದಿ । ತತ್ । **ಅಭ್ಯಪ್ರಥೇಥಾಮ್** ಅಭಿ ವಿಸ್ತಾರಯತಮ್ । ಹೇ ದ್ಯಾವಾಪೃಥಿವ್ಯೌ ಯುವಾಮ್ ಅಸ್ಮಾಕಂ **ಸ್ಯೋನೇ** ಸುರೂಪೇ ಸುಖಕಾರ್ಯೇ **ಭವತಮ್** । **ತೇ** ದ್ಯಾವಾಪೃಥಿವ್ಯೌ **ನ:** ಅಸ್ಮಾನ್ **ಅಂಹಸಃ** ಪಾಪಾತ್ **ಮುಞ್ಚತಮ್** । ಮೋಚಯತಮ್ ॥

**ದ್ಯಾವಾಪೃಥಿವೀ** ದ್ಯುಲೋಕ ಪೃಥಿವೀಲೋಕಗಳ ಅಭಿಮಾನಿ ದೇವತೆಗಳೇ ಪ್ರಾಣ ಮತ್ತು ಉದಾನ ದೇವತೆಗಳೇ – ದ್ಯಾವಾಪೃಥಿವೀ ಪ್ರಾಣೋದಾನೌ ಶಂ. ೪–೩– ೧–೨೨ ॥ **ವಾಂ** ತಾವಿಬ್ಬರೂ **ಸುಭೋಜಸೌ** ಒಳ್ಳೆಯ ಭೋಜನ ಸಂಕೇತವಾದ ಭೋಗಭಾಗ್ಯಗಳನ್ನಿತ್ತು ಪಾಲನೆಪೋಷಣೆ ಮಾಡುವವರೆಂದು **ಮನ್ಯೇ** ಮನಃ ಪೂರ್ವಕವಾಗಿ ತಿಳಿದಿದ್ದೇನೆ – ಮನ್ಯತೇ ಕಾನ್ತಿಕರ್ಮಾ ನಿಘಂ ೨–೬ । **ಯೇ** ಈ ದ್ಯುಲೋಕ ಪೃಥಿವೀಲೋಕಗಳು **ಅಮಿತಮ್** ಅಪರಿಮಿತವಾದ **ಯೋಜನಮ್** ಲೌಕಿಕವಾದ ಧನಾದಿಗಳನ್ನೂ ಮೋಕ್ಷಾದಿ ಆಧ್ಯಾತ್ಮಿಕ ಐಶ್ವರ್ಯವನ್ನೂ **ಅಭಿ ಅಪ್ರಥೇ ಥಾಮ್** ನಾಲ್ಕೂ ಕಡೆಗಳಿಂದಲೂ ಅನುಗ್ರಹಿಸಲಿ. **ದ್ಯಾವಾಪೃಥಿವೀ** ಪ್ರಾಣೋದಾನ ಗಳೆರಡೂ–ದ್ಯುಲೋಕ ಪೃಥಿವೀ ಲೋಕಗಳೆರಡೂ **ಸ್ಯೋನೇ ಭವತಮ್** ಸುಖ ದಾಯಕವಾಗಿರಲಿ ಮೋಕ್ಷಧಾಮಗಳಾಗಿರಲಿ. **ತೇ** ಅವುಗಳೆರಡೂ **ಸ್ಯೋನೇ ಭವತಮ್** ನಮಗೆ ಸುಖಪ್ರದವಾಗಿರಲಿ. **ನಃ ಅಂಹಸಃ ಮುಞ್ಚತಮ್** ನಮ್ಮನ್ನು ಪಾಪ ಬಂಧನಗಳಿಂದ ಬಿಡುಗಡೆಮಾಡಲಿ.

ದ್ಯುಲೋಕ ಪೃಥಿವೀಲೋಕಾಭಿಮಾನಿ ದೇವತೆಗಳೂ ಪ್ರಾಣೋದಾನ ದೇವತೆಗಳೂ ನಮಗೆ ಸುಖಭೋಗಭಾಗ್ಯಗಳನ್ನಿತ್ತು ಪಾಲಿಸಿ ಪೋಷಿಸುವರೆಂದು ಮನಃಪೂರ್ವಕವಾಗಿ ನಂಬಿದ್ದೇನೆ. ಈ ಇಬ್ಬರೂ ದೇವತೆಗಳು ಧನ ಆದಿ ಲೌಕಿಕ ಸುಖಸೌಕರ್ಯಗಳನ್ನೂ ಮೋಕ್ಷಾದಿ ಆಧ್ಯಾತ್ಮಿಕಭಾಗ್ಯವನ್ನೂ ಅನುಗ್ರಹಿಸಿ ಎರಡೂ ಲೋಕಗಳು ಸುಖಪ್ರದವಾಗಿರುವಂತೆ ಮಾಡಲಿ ಮತ್ತು ನಮ್ಮನ್ನು ಪಾಪ ಬಂಧನ ಗಳಿಂದ ಮುಕ್ತಿಗೊಳಿಸಲಿ.

ಬಾನುಬುವಿಗಳೆ ! ಪಾಲಿಸುವ ನಿಮ್ಮನ್ನು ಬಲ್ಲೆವು ಸರ್ವಥಾ ।
ಅಮಿತಸಂಪದವಿತ್ತು ಸೊಗವನ್ನಿತ್ತು ಮುಕ್ತರನಾಗಿಸಿಮ್ ॥

ಸ್ತೋಭ ಪದಪಾಠ – ವಾಕ್–ಇಯಮ್–ಅನ್ತರಿಕ್ಷೇ–ಸಲಿಲಮ್–ಲೇಲಾಯ ॥

॥ ತ್ರೀಣಿ ಲೋಕಾನಾಂ ವ್ರತಾನಿ ದಿವೋಽನ್ತರಿಕ್ಷಸ್ಯ ಪೃಥಿವ್ಯಾಃ ॥ ಅಂತರಿಕ್ಷಂ ಗಾಯತ್ರೀನ್ದ್ರಃ ॥ ತತ್ರೇದಂ ದ್ವಿತೀಯಮಾಂತರಿಕ್ಷಸ್ಯವ್ರತಮಿತಿ ॥

೧೪೯.೧. ವಾಕ್ । ೨ । ವಾಗೀಯಮ್ । ಕಯಾನಶ್ಚಿತ್ರಽಇಆಭೂಽ೧ವಾಽ೨ತ್ ॥ ಊತೀಸದಾವೃಽಇಧಾಃಸಾಽ೧ಖಾಽ೨ ॥ ಕಯಾಶಚಿಷ್ಠಽಇಯಾವಾಽ೧ರ್ತ್ತಾಽ೨ ॥ ವಾಕ್ । ೨ । ವಾಗೀಯಾಽ೨ । ವಾಽ೨ಇಳಔಹೋವಾ ॥ ಏ । ಅನ್ತರಿಕ್ಷೇಸಲಿಲಂಲ್ಲೇಲಾಯಾಽ೨ಇಳಿಕ ॥ *ದೀ – ೧೩ । ಪ – ೧೨ । ಮಾ – ೮ । ಥೈ ॥ ೨೦.೨೨೬ ॥*

ಈ ೨೨೬ನೆಯ ಸಾಮಗಾನವು ಕಯಾನಶ್ಚಿತ್ರ ಆಭುವತ್ ೧೪೯ನೆಯ ಋಕ್ ಮೇಲೆ ಅಧಿಷ್ಠಿತವಾಗಿದೆ.

ಸ್ತೋಭ ಭಾಷ್ಯ – ಪರ್ಜನ್ಯ ವಿದಾರಣೋದ್ಭವಾ ವಾಗಿಯಂ ಪ್ರವರ್ತತೇ। ಅನ್ತರಿಕ್ಷೇ ಚ ಸಲಿಲಂ ಲೇಲಾಯ ಲೀಯತೇ ಸಂಹನ್ಯತೇ ವಿನಾಧಾರಮಿತಿ । ಮಹದಿದಂ ಅತೀನ್ದ್ರಿಯಂ ಇನ್ದ್ರಸ್ಯ ಭಗವತಃ ಕರ್ಮಂ ।

ಮೇಘವು ಛಿದ್ರವಾಗಿ ಮಳೆಯುಂಟಾಗುವ ಬಗೆಯು ವಾಕ್ ಶಬ್ದಗಳಲ್ಲಿ ವ್ಯಕ್ತವಾಗುತ್ತಿದೆ. ಚಂಚಲವಾಗಿ ಚಲಿಸುವ ಸ್ವಭಾವದ ನೀರು ಯಾವ ಆಶ್ರಯವೂ ಇಲ್ಲದೆ ಅಂತರಿಕ್ಷದಲ್ಲಿ ರಾಶಿರಾಶಿಯಾಗಿ ಒಟ್ಟಾಗಿ ಒಗ್ಗಟ್ಟಿನಲ್ಲಿದ್ದೂ ಕರಗಿಹೋಗುವ ಈ ಮಹತ್ವದಪರಿಯು ಅತೀನ್ದ್ರಿಯನಾದ ಇನ್ದ್ರಭಗವಂತನು ನೀರಿನ ಮುಖಾಂತರ ನಮಗೆ ಕಮ್ ಸುಖವನ್ನನುಗ್ರಹಿಸುವ ಒಂದು ಪ್ರಕಾರವಾಗಿದೆ । ಅರ.ಸಾ ೨೨೬ ॥

ಸ್ತೋಭ ಪದಪಾಠ – ಪ್ರತಿಷ್ಠಾ–ಪ್ರತಿ–ಸ್ಥಾ–ಅಸಿ–ಪ್ರತಿಷ್ಠಾ–ಪ್ರತಿ–ಸ್ಥಾ–ವರ್ಚಃ–ಅಸಿ–ಮನಃ–ಅಸಿ–ಭೂತಮ್ ॥

। ಪೃಥಿವೀವ್ರತಮ್ । ಪೃಥಿವೀ ಜ್ಯೋತಿಷ್ಮತೀ ಜಗತೀದ್ಯಾವಾಪೃಥಿವ್ಯೌ ॥

**೧೪೯.೨. ಪ್ರತಿಷ್ಠಾಸಿಪ್ರತಿ । ಷ್ಠಾ । ೨-೩ । ವರ್ಚೋಽಸಿಮನೋಽಸಿ ಐಹೀ । ಮನ್ಯೇವಾಂದ್ಯಾವಾಪೃಥಿವೀಸುಭೋಽಜಸಾವ್ಯೈಹೀ ॥ ಯೇ ಅಪ್ರಥೇಥಾಮಮಿತಮಭಿಯೋಽಜನಾಮ್ಯೈಹೀ ॥ ದ್ಯಾವಾಪೃಥಿವೀಭ ವತಂಸ್ಯೋಽನಾಐಹೀ ॥ ತೇನೋಽಮುಞ್ಚತಮಂಹಸಾಐಹೀ । ಪ್ರತಿಷ್ಠಾಸಿಪ್ರತಿ । ಷ್ಠಾ । ೨-೩ । ವರ್ಚೋಽಸಿಮನೋಽಸಿಐಹೀಽ೩ । ಹಾಉವಾ ॥ ಏ । ಭೂತಮ್ । ೨-೩ ॥**

*ದೀ - ೪೭ / ಪ - ೨೫ / ಮಾ - ೯ / ಇೋ // ೨೦.೨೨೭ //*

ಈ ೨೨೭ನೆಯ ಸಾಮಗಾನವು ಮನ್ಯೇವಾಂದ್ಯಾವಾಪೃಥಿವೀ ೬೨೨ನೆಯ ಋಕ್ ಮೇಲೆ ಅಧಿಷ್ಠಿತವಾಗಿದೆ.

ಸ್ತೋಭ ಭಾಷ್ಯ - ಹೇ ದ್ಯೌಃ ಪೃಥಿವೀ ಚ ಪ್ರತಿಷ್ಠಾ ಸೂರ್ಯಾ ದೀನಾಮಸಿ ಮನುಷ್ಯಾದೀನಾಂ ಚ ಅಸಿ । ದ್ಯಾವಾ ಪೃಥಿವೀಗತೇನ ಭೋಗ್ಯೇನ ಆಪ್ಯಾಯನಾತ್ । ವರ್ಚೋ ಮನಶ್ಚಾಸೀತಿ ಉಚ್ಯತೇ । ಭೂತಂ ಪರಮಾರ್ಥರೂಪಂ ಪರಮಾರ್ಥತತ್ವಂ ಏತದ್ವಶಾಲ್ಲಭ್ಯತೇ ॥ ಅರ.ಸಾ ೨೨೭ ॥

ದ್ಯಾವಾಪೃಥ್ವಿಗಳು ಅನುಗ್ರಹಿಸುವ ಆಪ್ಯಾಯಮಾನವಾದ ಭೋಗಭಾಗ್ಯ ಗಳಿಂದಲೇ ಮನುಷ್ಯಾದಿ ಜೀವಜಗತ್ತಿನ ಹಾಗೂ ಸೂರ್ಯಾದಿ ದೇವತೆಗಳ ಪಂಚ ಭೂತಗಳ ಪ್ರತಿಷ್ಠಾರೂಪವಾದ ಅಸ್ತಿತ್ವವಿದೆ. ಮನಸ್ಸೂ ಕೀರ್ತಿ ಆದಿ ವರ್ಚಸ್ಸೂ ದ್ಯಾವಾಪೃಥ್ವಿಗಳ ಅನುಗ್ರಹದಿಂದಲೇ. ಈ ಪರಿಯತಿಳುವಳಿಕೆಯಿಂದಲೇ ಭಾವನೆ ಯಿಂದಲೇ ಜೀವನಕ್ರಮವನ್ನು ರೂಪಿಸಿಕೊಳ್ಳುವುದರಿಂದ ಪರಮಾರ್ಥವು ನಮ್ಮ ವಶವಾಗುತ್ತದೆ । ಅರ.ಸಾ ೨೨೭ ॥

॥ ವಾಮದೇವೋ ಗೌತಮಃ ಅನುಷ್ಟುಪ್ ಇನ್ದ್ರಃ ॥

೧ ೨ ೩ ೧ ೨ ೩ ೧ ೨ ೩ ೨ ೩ ೧ ೨
ಹರೀ ತ ಇನ್ದ್ರ ಶ್ಮಶ್ರೂಣ್ಯುತೋ ತೇ ಹರಿತೌ ಹರೀ ।
೧ ೨ ೩ ೧ ೨ ೩ ೧ ೨ ೩ ೧ ೨
ತಂ ತ್ವಾ ಸ್ತುವನ್ತಿ ಕವಯ೨ ಪರುಷಾಸೋ ವನರ್ಗವಃ ॥ ೯–೬೨೩ ॥

೧ ೨೦ ೩ ೧ ೨೦ ೩ ೨ ೩ ೧ ೨ ೩೦ ೧ ೨
ಹರೀ–ತೇ–ಇನ್ದ್ರ–ಶ್ಮಶ್ರೂಣಿ । ಉತ–ಉ–ತೇ–ಹರಿತೌ–ಹರೀ–ಇತಿ ॥ ತಮ್–
೩ ೧ ೨ ೩ ೧ ೨ ೩ ೧ ೨
ತ್ವಾ–ಸ್ತುವನ್ತಿ–ಕವಯಃ । ಪರುಷಾಸಃ–ವನರ್ಗವಃ ॥ ೯–೬೨೩ ॥

ಸ್ತೋಭ ಪದಪಾಠ – ಋಶ್ಯಾಸಃ–ಇನ್ದ್ರ–ಭುಜ್–ಇತಿ–ಮಘವನ್–ಇನ್ದ್ರ–ಭುಜ್–ಇತಿ–ಭುಜ್–ಇತಿ–ಪ್ರಭುಜ್–ಪ್ರ–ಭುಜ್–ಇತಿ–ಇನ್ದ್ರಃ–ತಸರಪೂತಃ–ತಸರ–ಪೂತಃ ॥

॥ ಋಶ್ಯಸಾಮ ವ್ರತಮ್ । ಕಶ್ಯಪೋಽನುಷ್ಟುಬಿನ್ದ್ರಃ ॥

೨ ೦ ೧ ೨ ೧೦ ೦ ೨ ೨
೧೩೯.೩. ಹರೀತಇನ್ದ್ರಶ್ಮಶ್ರೂಣೇ ॥ ಉತೋತೇಹರಿತಾಽ೧ಉಹಾಽ
೨ ೧೦ ೨ ೪ ೫ ೨ ೧೦ ೦ ೨
೩ರೀ ॥ ತನ್ತ್ವಾಸ್ತುವನ್ತಿಕಾಽ೩ । ವಾಯಾಃ ॥ ಪರುಷಾಸೋವನಾಽ
೪ ೫ ೧ ೦ ೨ ೧ ೨ ೧ ೨ ೧ ೨ ೧ ೨
೩ । ಗಾವಾಃ ॥ ಋಶ್ಯಾಸಇನ್ದ್ರಭುಜ್ಜೆತಿಮಘವನ್ನಿನ್ದ್ರಭುಜ್ಜೆತಿಭುಜ್ಜೆತಿಪ್ರ
೧ ೦ ೨ ೦ ೩
ಭುಜ್ಜೆತೀನ್ದ್ರಸ್ತಸರಪೂತಾಽ೨೩೪೫ಃ ॥

*ದೀ – ೯ / ಪ – ೭ / ಮಾ – ೬ / ಘೂ ॥ ೨೨.೨೨೮ ॥*

॥ ದಶ ಷಷ್ಠಃ ಖಣ್ಡಃ ॥

॥ ಇತ್ಯರಣ್ಯೇಗೇಯಗಾನೇ ಪಂಚಮಸ್ಯಾರ್ಧಃಪ್ರಪಾಠಕಃ ॥

ಈ ಋಕ್ ಅನ್ಯವೇದಗಳಲ್ಲಿಲ್ಲ. ಶ್ರೀ ಸಾಮಶ್ರಮಿ ಸಾತವೇಳಕರ್ ಮುಂತಾದವರು ಸಂಪಾದಿಸಿರುವ ಗ್ರಂಥಗಳಲ್ಲಿನ ಋಕ್ ಪದ ಸಾಮಗಾನಗಳಲ್ಲಿ **ಪುರುಷಾ ಸೋವನರ್ಗವಃ** ಎಂಬ ಪಾಠವಿದ್ದು ಇದನ್ನನುಸರಿಸಿ ಶ್ರೀ ಭರತಸ್ವಾಮಿಗಳ ಹಾಗೂ ಸಾಯಣರ ಭಾಷ್ಯವಿದೆ. ಶ್ರೀಕೃಷ್ಣಸ್ವಾಮಿಶ್ರೌತಿಗಳು ನಾರಾಯಣದೀಕ್ಷಿತರು ರಾಮನಾಥ ದೀಕ್ಷಿತರು ಮತ್ತು ಇದೀಗ ಅಂತಾರಾಷ್ಟ್ರೀಯ ವಿದ್ವಾಂಸರಾದ ಡಾ. ಬಿ. ಆರ್. ಶರ್ಮರು ಸಂಪಾದಿಸಿರುವ ಗ್ರಂಥಗಳಲ್ಲಿನ ಋಕ್ ಪದ ಸಾಮಗಾನಗಳಲ್ಲಿ **ಪರುಷಾ ಸೋವನರ್ಗವಃ** ಪಾಠವಿದ್ದು ಇದನ್ನುನಸರಿಸಿ ಸ್ತೋಭ ಭಾಷ್ಯವಿದೆ.

ಸ್ತೋಭ ಭಾಷ್ಯ – ಹೇ ಇನ್ದ್ರ ತೇ ತವ ಶ್ಮಶ್ರೂಣೀ ಶ್ಮಶ್ರು ಹರೀ ಹರಿತ ವರ್ಣೇ ನೀಲೇ । ಉತ ಅಪಿ ಚ ಅಶ್ವೌ ಹರಿತೌ ತಂ ತ್ವಾಂ ಏವಂ ವಿಧಂ ಕವಯೋ ವಿಜ್ಞಾನಯುಕ್ತಾಃ ಸ್ತುವನ್ತಿ ॥ ತಥಾ **ಪರುಷಾಸಃ** ದುಷ್ಟಬುದ್ಧಯಃ ಅಪಿ ತಥಾ **ವನರ್ಗವಃ** ವನಗಾಮಿನೋ ಅಪಿ ತಸ್ಕರಾಃ ಪ್ರಣಮನ್ತೇ ಸರ್ವಸ್ಯ ತ್ವಂ ಆರಾಧ್ಯ ಇತ್ಯರ್ಥಃ । ಇನ್ದ್ರ **ಮಘವನ್** ಸರ್ವಾರಾಧ್ಯ । **ಋಶ್ಯಾಸಃ** ಹೀನ ವಿಜ್ಞಾನಾದಿ ಬಲಾ ಅಪಿ–ತ್ವತ್ಪ್ರಸಾದಾತ್ **ಭುಜ್** ಭೋಕ್ತಾರಃ ಸಂಪದ್ಯನ್ತೇ । **ಪ್ರಭುಜ್** ಪ್ರಕರ್ಷೇಣ ದೇವಲೋಕ ಭೋಕ್ತಾರೋ ಭವನ್ತಿ । ಇನ್ದ್ರೋ ಭಗವಾನ್ **ತಸರಪೂತಃ** ಸ್ಪಷ್ಟಪಾಯೂರ್ಪಸ್ಥ ಇತಿ ಲಜ್ಜಾ ವಶೇನ ಪರೋಕ್ಷನಿರ್ದೇಶಃ ॥

ಇನ್ದ್ರ ಭಗವಂತನೇ ನೀನು ಹಸಿರು ಮೀಸೆಯವನೆಂದೂ ಹಸಿರುಬಣ್ಣದ ಕುದುರೆಗಳನ್ನುಳ್ಳವನೆಂದೂ ನಿನ್ನ ವಿಶೇಷಜ್ಞಾನಪಡೆದ ಮಹಾತ್ಮರು ಸ್ತುತಿಸುತ್ತಾರೆ. ದುಷ್ಟಬುದ್ಧಿಯುಳ್ಳವರೂ ಕಳ್ಳರೂ ವನವಾಸಿಗಳೂ ನಿನ್ನನ್ನು ನಮಸ್ಕರಿಸುತ್ತಾರೆ. ಹೀಗೆ ಸರ್ವರಿಂದಲೂ ಆರಾಧಿಸಲ್ಪಡುತ್ತಿರುವ ಅಪಾನವಾಯುದ್ವಾರಾದಿ ಪ್ರಕಟಿತ ಲಜ್ಜಾಂಗ ಗಳನ್ನುಳ್ಳ ನಿನ್ನ ಕೃಪಾ ಅನುಗ್ರಹಗಳಿಂದ ಹೀನಗುಣಿಗಳೂ ದುಷ್ಟರೂ ಪಾಶವೀಬಲ ಯುಕ್ತರೂ ಸಹ ಮಹದೈಶ್ವರ್ಯವಂತರಾಗಿ ದೇವಲೋಕದ ಭೋಗಭಾಗ್ಯಗಳನ್ನು ಅನುಭವಿಸುತ್ತಾರೆ । ಸಾ ೨೨೮ ॥

ಸಾಯಣ ಭಾಷ್ಯ – ಹೇ ಇನ್ದ್ರ ತೇ ತವ **ಶ್ಮಶ್ರೂಣಿ ಹರೀ** ಸೋಮಪಾನೇನ ಹರಿತವರ್ಣಾನಿ । ತಥಾ ಚ ಶ್ರೂಯತೇ । ಇನ್ದ್ರಃ ಶ್ಮಶ್ರೂಣಿ ಹರಿತಾನಿ ಪ್ರಷ್ಣುತ ಇತಿ । ಶೇಶ್ಛನ್ದಸಿ ಬಹುಲಮ್ ಪಾ– ೬–೧–೭೦ । ಇತಿ ಹರಿಶಬ್ದಾತ್ಪರಸ್ಯ ಶೇರ್ಲುಕ್ । **ಉತೋ** ಅಪಿ ಚ । ತೇ **ಹರೀ** ಅಶ್ವೌ ಹರಿತೌ ಹರಿದ್ವರ್ಣೌ । **ಕವಯಃ** ಮೇಧಾವಿನಃ **ಪುರುಷಾಸಃ** ಪುರುಷಾಃ । **ವನರ್ಗವಃ** – ವನನೀಚಿಯಾಃ । ಸಂಭಜನೀಯಾಃ ಸೇವನೀಯಾಃ ಗಾವೋ ಯೇಷಾಂ ತೇ ವನರ್ಗವಃ । ಮಧ್ಯರೇಫಶ್ಛಾನ್ದಸಃ । ಗೋಸ್ತ್ರೀಯೋಃ ಪಾ ೧–೨–೪೮ । ಇತಿ ಹ್ರಸ್ವತ್ವಮ್ – ತಾದೃಶಃ ಕವಯಃ ತೇ ತ್ವಾ ತ್ವಾಂ ಸ್ತುವನ್ತಿ ॥

ಇನ್ದ್ರ ಪರಮೇಶ್ವರ್ಯಶಾಲಿಯಾದ ಭಗವಂತನೇ ತೇ ನಿನ್ನ **ಶ್ಮಶ್ರೂಣೀ** ಮೀಸೆಗಳು ಹೃದಯವನ್ನು ಆಶ್ರಯಿಸಿರುವ ಶ್ಮಶ್ರೂಣೀ ವಚನವ್ಯತ್ಯಯಃ ಶರೀರದಲ್ಲಿ –

ಹೃದಯದಲ್ಲಿ ಶ್ಮ – ಶರೀರಮ್ ನಿರು ೩–೫ । ಶರೀರಂ – ಹೃದಯಮ್ ತೈ ೩–೧೦–೮–೭ । ಶ್ರಿತಃ ಪ್ರಾಪ್ತವಾದ ಆಶ್ರಯಿಸಿರುವ ಶ್ಮಶ್ರುಶ್ಮನಿ ಶ್ರಿತಮ್ ನಿರು ೩–೫ । **ಹರೀ** ಹಸಿರುಬಣ್ಣದ ರೋಗನಿವಾರಕವೂ ಸ್ವಾಸ್ಥ್ಯಪ್ರದವೂ ಆದ ಪ್ರಾಣ ಮತ್ತು ಉದಾನಗಳು – ಪ್ರಾಣೋ ವೈ ಹರಿಃ ಕೌ ೧೭–೯ । **ತೇ** ನಿನ್ನ **ಹರೀ ಹರಿತೌ** ಎರಡೂ ಕುದುರೆಗಳು ಹಸಿರು ಬಣ್ಣದವು. ಅಜ್ಞಾನ ನಿವಾರಕವೂ ಆನಂದದಾಯಕವೂ ದಿವ್ಯವೂ ಆದ ಜ್ಯೋತಿಃ ಸ್ವರೂಪ ಶಾನ್ತಸ್ವರೂಪಗಳೆರಡೂ – ಹರಿತೇನ ಹಿರಣ್ಯಮಯೇನ ಮೈ ೪–೨–೧ । ಋಕ್ಸಾಮೇ ವಾ ಇನ್ದ್ರಸ್ಯ ಹರೀ ಐ ೨–೨೪ । ಜ್ಯೋತಿಸ್ತದ್ಯದೃಕ್ ಜೈ ೧–೭೬ । ಯದ್ಧ ವೈ ಶಿವಂಶಾನ್ತಂ ತತ್ ಸಾಮ ಜೈ ೩–೫೨ । **ವನರ್ಗವಃ** ಗೋವುಗಳ ಮತ್ತು ವೇದವಾಣಿಯ ಭಕ್ತರೂ ಗೋಸೇವಾನಿರತರೂ ಭಜನ ಪೂಜಾರ್ಹನಾದ ನಿನ್ನೆಡೆಗೆ ಪಯಣಿಸುತ್ತಿರುವ ವಿರಕ್ತರೂ ತಪಸ್ವಿಗಳೂ – ವನರ್ಗೂ ವನಗಾಮಿನೌ ನಿರು ೩–೧೪ । **ಕವಯಃ ಪುರುಷಾಸಃ** ಜ್ಞಾನಿಗಳೂ ಮೇಧಾವಿಗಳೂ ಆದ ಪುರುಷಶ್ರೇಷ್ಠರು–ಯೇ ವಿದ್ವಾಂಸಸ್ತೇಕವಯಃ ಐ ೨–೨ । **ತಂ ತ್ವಾ** ಆ ಪ್ರಸಿದ್ಧನೂ ಮಹಾಮಹಿಮನೂ ಆದ ನಿನ್ನನ್ನು **ಸ್ತುವನ್ತಿ** ಸ್ತುತಿಸುತ್ತಾರೆ ಪ್ರಶಂಸಿಸುತ್ತಾರೆ.

ಪರಮೈಶ್ವರ್ಯಶಾಲಿಯಾದ ಇನ್ದ್ರ ಭಗವಂತನೇ ರೋಗನಿವಾರಕನೂ ಸ್ವಾಸ್ಥ್ಯಪ್ರದನೂ ಅಜ್ಞಾನ ನಿವಾರಕನೂ ಆನಂದದಾಯಕನೂ ಜ್ಯೋತಿ ಸ್ವರೂಪನೂ ಶಾನ್ತ ಸ್ವರೂಪನೂ ಮಹಾಮಹಿಮನೂ ಆದ ನಿನ್ನನ್ನು ಗೋವುಗಳ ಮತ್ತು ವೇದಗಳ ಭಕ್ತರೂ ಗೋಪಾಲಕರೂ ವನವಾಸಿಗಳೂ ಸಾಧಾರಣರೂ ತಪಸ್ವಿಗಳೂ ವಿರಕ್ತರೂ ಹೃದಯಾಂತರಾಳದಿಂದ ಸ್ತುತಿಸುತ್ತಾರೆ ಪ್ರಶಂಸಿಸುತ್ತಾರೆ.

*ಇಂದ್ರ ! ನೀನೀಂಟುತೀ ಸೋಮಂ ಪಸಿರಾದಯ್ ! ಭುವನ್ಮುಖಂ ।*
*ಮೀಸೆ ಮೇಣಾಶ್ವಮುಂ ತಾನಂತೆಂದು ಪೇಳ್ವರುದಾರಿಗಳ್ ॥*

## ಋಕ್ – ೭೨೪

॥ ವಾಮದೇವೋ ಗೌತಮಃ ಅನುಷ್ಟುಬಿನ್ದ್ರಃ ॥

೨ಉ ೩ ೧ ೨ ೩ ೨ ೩ ೨ ೩ ೧ ೨ ೩ ೨
**ಯದ್ವರ್ಚೋ ಹಿರಣ್ಯಸ್ಯ ಯದ್ವಾ ವರ್ಚೋ ಗವಾಮುತ ।**
೩ ೨ ೩ ೧ ೨ ೩ ೨ ೩ ೧ ೨ ೩ ೧ ೨
**ಸತ್ಯಸ್ಯ ಬ್ರಹ್ಮಣೋ ವರ್ಚಸ್ತೇನ ಮಾ ಸಂ ಸೃಜಾಮಸಿ** ॥ ೧೦–೭೨೪ ॥

೨ ೧೨೦ ೧೨೦ ೩ ೧೨೦ ೧೨೦ ೩ ೨ ೩ ೧
**ಯತ್–ವರ್ಚಃ–ಹಿರಣ್ಯಸ್ಯ । ಯತ್–ವಾ–ವರ್ಚಃ–ಗವಾಮ್–ಉತ ॥ ಸತ್ಯ**

೨ ೧೨೦ ೧೨೦ ೧ ೨೦ ೩ ೨ ೩
ಸ್ಯ–ಬ್ರಹ್ಮಣಃ–ವರ್ಚಃ । ತೇನ–ಮಾ–ಸಮ್–ಸೃಜಾಮಸಿ ॥ ೧೦-೬೨೪ ॥

೩ ೨ ೧೨೦ ೩ ೨ ೩ ೨ ೩ ೨ ೩ ೨
ಸ್ತೋಭ ಪದಪಾಠ – ಅಹಮ್–ಅನ್ನಮ್–ಅಹಮ್–ಅನ್ನಾದಃ–ಅನ್ನ–ಅದಃ –ಅಹ
೩ ೨ ೩ ೨
ಮ್–ವಿಧಾರಯಃ–ವಿ–ಧಾರಯಃ ॥ ಸಾ. ೨೨೯ ॥

॥ ದಿಶಾಂವ್ರತಮ್ ದಶಾನುಗಾನಮ್ । ದಿಶೋಽನುಷ್ಟುಪ್ಆತ್ಮಾ ॥ ಕಶ್ಯಪೋ ಗಾಯತ್ರೀನ್ದ್ರಃ ॥

೨೦ ೦ ೦ ೧ ೨ ೧
೧೪೦.೧. ಹಾಉಹಾಉಹಾಉ । ಅಹಮನ್ನಮ್ । ೩ । ಅಹಮ
೨೦ ೧೦ ೨೦ ೧೦ ೨೦ ೧೦
ನ್ನಾದೋ । ಹಮನ್ನಾದೋ । ೨ । ಹಂವಿಧಾರಯೋ । ೨ ।
೨೦ ೧ ೨೦ ೦ ೦ ೧ ೨೦ ೧ ೨
ಹಂವಿಧಾರಯಃ । ಹಾಉಹಾಉಹಾಉ । ಯದ್ವರ್ಚೋ೯ಹಿರಣ್ಯ ।
೧ ೨೦ ೧ ೨೦ ೧ ೦ ೨ ೧ ೨ ೧ ೨ ೧ ೨೦ ೧
ಸ್ಯಾ ॥ ಯದ್ವಾವರ್ಚೋ೯ಗವಾಮು । ತಾ ॥ ಸತ್ಯಸ್ಯಬ್ರಹ್ಮಣೋವ ।
೦ ೨೦ ೧ ೨೦ ೧ ೨೦ ೦ ೦
ರ್ಚಾಃ ॥ ತೇನಮಾಸಂ೧ಸೃಜಾಮ । ಸಾಇ । ಹಾಉಹಾಉಹಾಉ ।
೧ ೨ ೧ ೨೦ ೧೦ ೨೦ ೧೦
ಅಹಮನ್ನಮ್ । ೩ । ಅಹಮನ್ನಾದೋ । ಹಮನ್ನಾದೋ । ೨ ।
೨೦ ೧೦ ೨೦ ೧ ೨೦ ೦ ೦
ಹಂವಿಧಾರಯೋ । ೨ । ಹಂವಿಧಾರಯಃ । ಹಾಉಹಾಉಹಾಉ ।
೦ ೧ ೨ ೧ ೨೦ ೧೦ ೨೦ ೧
ವಾ ॥ ಏ । ಅಹಮನ್ನಮಹಮನ್ನಾದೋಹಂವಿಧಾರಯಃ । ೨–೩ ।
೦ ೧ ೦ ೩ ೧೧೧
ಏ । ಅಹಂ೧ಸುವರ್ಜ್ಯೋ೯ತೀಽ೨೩೪ಹಿಃ ॥

*ದೀ – ೫೩ । ಪ – ೩೯ । ಮಾ – ೨೬ । ಡು ॥ ೧.೨೨೯ ॥*

ಸ್ತೋಭ ಭಾಷ್ಯ – ಇನ್ದ್ರದೇವತಾಪ್ರಸಾದಾತ್ ಪರಮೇಶ್ವರಪ್ರಸಾದಾತ್ ಅಹಮನ್ನಂ ಅನ್ನಾದಶ್ಚ ಭೋಗ್ಯ ಭೋಕ್ತೃಭಾವೇನ ಭವೇಯಮ್ । ಅಹಂ ವಿಧಾರಯಃ ವಿಧಾರಯಿತಾ ಜಗತಃ ತಥಾ ಯದ್ವರ್ಚೋ೯ ದೀಪ್ತಿಃ ಸ್ಥೈರ್ಯಞ್ಚ ಹಿರಣ್ಯಸ್ಯ ಯದ್ವಾ –ಯಚ್ಚವರ್ಚೋ೯ ಮಹಾಭಾಗ್ಯಂ ಗವಾಮುತ । ತಥಾ ಸತ್ಯಸ್ಯ

ಬ್ರಹ್ಮಣಃ ವರ್ಚಃ ದೀಪ್ತಿಃ ಚಿದಾನಂದಪ್ರಕಾಶತಾ ತೇನ ಮಾ ಆತ್ಮಾನಂ ಸ೮\ಸೃಜಾಮಸಿ ಏಕಾರ್ಥ್ಯಮಾಪದ್ಯೇಮಹಿ ಪರಮೇಶ್ವರಪ್ರಸಾದಾತ್ ಸ್ವಜ್ಯೋ್ರ್ೀತಿಃ ಸ್ವಪ್ರಕಾಶಃ ॥ ಇನ್ದ್ರಪ್ರಸಾದಾದಹಂ ಸಹೋಽನ್ಯತ್ । ವಿರುದ್ಧಮಭಿಭವಾಮಿ । ಸಾಸಹಿಃ ಅಭಿಭಾವಯಾಮಿ; ಸಾಸಹಾನಃ ಸರ್ವದಾ ದುಷ್ಟತಾಂ ಅಭಿಭವನ್ ಪ್ರಜಾ ರಕ್ಷಾಮಿ । ವರ್ಚಃ ದೀಪ್ತಿರಹಂ ಭವೇಯಂ ಸರ್ವಸ್ಯ । ತೇಜಃ ತೇಜಸ್ವೀಸಪ್ರತಿಭಃ ಭವೇ ಯಮ್ ॥ ಸಾ ೨೨೯-೨೩೨ ॥

ಪರಮೇಶ್ವರನ ಅನುಗ್ರಹದಿಂದ ನಾನೇ ಅನ್ನವೂ ಅನ್ನಾದನೂ ಆಗಿ ಭೋಗ್ಯ ಭೋಕ್ತೃಭಾವದಿಂದಿದ್ದೇನೆ. ನಾನೇ ಸಮಸ್ತ ಜಗತ್ತನ್ನೂ ತುಂಬಿದ್ದೇನೆ ಆವರಿಸಿದ್ದೇನೆ. ಸತ್ಯಸ್ವರೂಪಿಯಾದ ಭಗವಂತನ ಸೌಂದರ್ಯ ಸ್ಥೈರ್ಯ ಆಕರ್ಷಣೆ ಸೂರ್ಯಕಿರಣಗಳ ದೀಪ್ತಿ ಹೊಳಪೂ ನಾನೇ. ಪರಮೇಶ್ವರನ ಅನುಗ್ರಹದಿಂದ ಸರ್ವದಾ ದುಷ್ಟರನ್ನು ಎದುರಿಸಿ ನಿಗ್ರಹಿಸಿ ಪ್ರಜಾರಕ್ಷಣೆ ಮಾಡುತ್ತಾ ದೀಪ್ತಿವಂತನೂ ತೇಜೋವಂತನೂ ಆಗಿ ವಿಜೃಂಭಿಸುತ್ತಿದ್ದೇನೆ ॥ ಸಾ ೨೨೯-೨೩೨ ॥

ಸ್ತೋಭ ಪದಪಾಠ ಃ ಅಹಮ್-ಸಹಃ-ಅಹಮ್-ಸಾ-ಸಹಿಃ-ಅಹಮ್-ಸಾ-ಸಹಾನಃ ॥

೧೪೦.೨. ಹಾಉಹಾಉಹಾಉ । ಅಹ೮\ಸಹೋ೯ । ಹ೮\ಸಹೋ೯ । ೨ । ಹಙ್‌ಸಾಸಹಿಃ । ಅಹಙ್‌ಸಾಸಹಿಃ । ೨ । ಅಹಙ್‌ಸಾಸಹಾನೋ೯ । ಹ೮\ಸಾಸಹಾನೋ೯ । ಹ೮\ಸಾಸಹಾನಃ । ಹಾಉಹಾಉಹಾಉ । ಯದ್ವರ್ಚೋ೯ಹಿರಣ್ಯ । ಸ್ಯಾ ॥ ಯದ್ವಾವರ್ಚೋ೯ಗವಾಮು । ತಾ ॥ ಸತ್ಯಸ್ಯಬ್ರಹ್ಮಣೋವ । ಚಾಃ ॥ ತೇನಮಾಸ೮\ಸೃಜಾಮ । ಸಾಇ । ಹಾಉಹಾಉಹಾಉ । ಅಹ೮\ಸಹೋ೯ । ಹ೮\ಸಹೋ೯ । ೨ । ಹಙ್‌ಸಾಸಹಿಃ । ಅಹಙ್‌ಸಾಸಹಿಃ । ೨ । ಅಹಙ್‌ಸಾಸಹಾನೋ೯ । ಹ೮\ಸಾಸಹಾನೋ೯ । ಹ೮\ಸಾಸಹಾನಃ । ಹಾಉ

೦ ೦ ೦ ೧ ೨ರ ೧ ೨ರ೧ ೨೧
ಹಾಉಹಾಉ । ವಾ ॥ ಏ । ಅಹ೮\ಸಹೋಽಹಜ್ಸಾಸಹಿರಹಜ್
೦ ೨ ೦ ೧ ೨ರ ೧ ೦ ೩ ೧೧೧
ಸಾಸಹಾನಃ । ೨–೩ । ಏ । ಅಹ೮\ಸುವರ್ಜ್ಯೋ ತೀಽ೨೩೪೫ಃ ॥

*ದೀ – ೬೨ / ಪ – ೩೯ / ಮಾ – ೨೬ / ಝು ॥ ೨.೨೩೦ ॥*

೨ರ ೦ ೦ ೧ ೨ರ ೧
೧೪೦.೩. ಹಾಉಹಾಉಹಾಉ । ಅಹಂವರ್ಚ್ಚೋ । ಹಂವ
೨ರ ೧ ೨ರ ೦ ೦ ೧ ೨ರ ೧
ರ್ಚ್ಚೋ । ಹಂವರ್ಚ್ಚಃ । ಹಾಉಹಾಉಹಾಉ । ಯದ್ವರ್ಚ್ಚೋಹಿ
೨ ೧ ೨ರ೧ ೨ರ ೧೦ ೨ ೧ ೨೧೨೧
ರಣ್ಯ । ಸ್ಯಾ ॥ ಯದ್ವಾವರ್ಚ್ಚೋಗವಾಮು । ತಾ ॥ ಸತ್ಯಸ್ಯಬ್ರಹ್ಮ
೨ರ ೧ ೦ ೨ರ ೧ ೨ರ ೧ ೨ರ ೦
ಣೋವ । ಚಾಃ ॥ ತೇನಮಾಸ೮\ಸೃಜಾಮ । ಸಾಇ । ಹಾಉಹಾ
೦ ೧ ೨ರ ೧ ೨ರ ೧
ಉಹಾಉ । ಅಹಂವರ್ಚ್ಚೋ । ಹಂವರ್ಚ್ಚೋ । ಹಂವ ರ್ಚ್ಚಃ ।
೨ ೦ ೧ ೨ರ
ಹಾಉಹಾಉಹಾಉ । ವಾ । ಏ । ಅಹಂವರ್ಚ್ಚಃ । ೨–೩ । ಏ ।
೧ ೦ ೩ ೧೧೧
ಅಹ೮\ಸುವರ್ಜ್ಯೋತೀಽ೨೩೪೫ಃ ॥

*ದೀ – ೨೬ / ಪ – ೨೭ / ಮಾ – ೨೦ / ಖೌ ॥ ೩.೨೩೧ ॥*

೨ರ ೦ ೦ ೧ ೦ ೨ರ ೧ ೦
೧೪೦.೪. ಹಾಉಹಾಉಹಾಉ । ಅಹಂತೇಜೋ । ಹಂತೇ
೨ರ ೧ ೦ ೨ರ ೦ ೦ ೧ ೨ರ ೧
ಜೋ । ಹಂತೇಜಃ । ಹಾಉಹಾಉಹಾಉ । ಯದ್ವರ್ಚ್ಚೋಹಿರ
೨ ೧ ೨ರ೧ ೨ರ ೧೦ ೨ ೧ ೨೧೨೧
ಣ್ಯ । ಸ್ಯಾ ॥ ಯದ್ವಾವರ್ಚ್ಚೋಗವಾಮು । ತಾ ॥ ಸತ್ಯಸ್ಯಬ್ರಹ್ಮ
೨ರ ೧ ೦ ೨ರ ೧ ೨ರ ೧ ೨ರ ೦
ಣೋವ । ಚಾಃ ॥ ತೇನಮಾಸ೮\ಸೃಜಾಮ । ಸಾಇ । ಹಾಉಹಾ
೦ ೧ ೦ ೨ರ ೧ ೦ ೨ರ ೧ ೦ ೨ರ
ಉಹಾಉ । ಅಹಂತೇಜೋ । ಹಂತೇಜೋ । ಹಂತೇಜಃ । ಹಾ

೦ ೦ ೦ ೧ ೦ ೨೦
ಉಹಾಉಹಾಉ । ವಾ ॥ ಏ । ಅಹಂತೇಜಃ । ೨–೩ । ಏ ॥
೧ ೦ ೩ ೧೧೧
ಅಹಉ\ಸುವರ್ಜ್ಯೋತೀಽ೨೩೪೫ಃ ॥

*ದೀ – ೩೫ । ಪ – ೨೭ । ಮಾ – ೨೦ । ಫೌ ॥ ೪.೨೩೨ ॥*

೧೨೦ ೩ ೧೨೦ ೩ ೧೨೦ ೩ ೧ ೨೦ ೩
ಸ್ತೋಭ ಪದಪಾಠ–ದಿಶಮ್–ದುಹೇ–ದಿಶೌ–ದುಹೇ–ದಿಶಃ–ದುಹೇ–ಸರ್ವಾಃ–ದುಹೇ ॥

೨೦ ೦ ೦ ೧ ೨ ೦ ೧೦ ೨ ೦
೧೪೦.೫. ಹಾಉಹಾಉಹಾಉ । ದಿಶನ್ದುಹೇ । ೩ । ದಿಶೌದುಹೇ ।
೧೦ ೨ ೦ ೧೦ ೨ ೦ ೨೦ ೦ ೦
೩ । ದಿಶೋದುಹೇ । ೩ । ಸರ್ವಾದುಹೇ । ಹಾಉಹಾಉಹಾಉ ।
೧ ೨೦ ೧ ೨ ೧ ೨೦ ೧ ೨೦ ೧ ೦ ೨ ೧
ಯದ್ವರ್ಚೋಹಿರಣ್ಯ । ಸ್ಯಾ ॥ ಯದ್ವಾವರ್ಚೋಗವಾಮು । ತಾ ॥
೨೧೨೧ ೨೦ ೧ ೦ ೨೦ ೧ ೨೦ ೧
ಸತ್ಯಸ್ಯಬ್ರಹ್ಮಣೋವ । ಚಾಃ ॥ ತೇನಮಾಸಉ\ಸೃಜಾಮ । ಸಾಇ ।
೨೦ ೦ ೦ ೧ ೨ ೦ ೧೦ ೨ ೦ ೧
ಹಾಉಹಾಉಹಾಉ । ದಿಶನ್ದುಹೇ । ೩ । ದಿಶೌದುಹೇ । ೩ । ದಿ
೦ ೨ ೦ ೧೦ ೨ ೦
ಶೋದುಹೇ । ೩ । ಸರ್ವಾದುಹೇ । ೩ । ಹಾಉಹಾಉಹಾಉ ।
೦ ೧ ೨ ೦ ೧ ೦ ೨ ೦ ೧ ೦ ೨ ೦ ೧ ೦ ೨ ೦
ವಾ ॥ ಏ । ದಿಶನ್ದುಹೇದಿಶೌದುಹೇದಿಶೋದುಹೇಸರ್ವಾದುಹೇ ।
೦ ೧ ೦ ೩ ೧೧೧
೨–೩ । ಏ । ಅಹಉ\ಸುವರ್ಜ್ಯೋತೀಽ೨೩೪೫ಃ ॥

*ದೀ – ೮೫ । ಪ – ೪೫ । ಮಾ – ೧೫ । ಮು ॥ ೫.೨೩೩ ॥*

ಸ್ತೋಭ ಭಾಷ್ಯ – ಪ್ರಾಙ್ಮುಖೋ ಯಾಗಾದಿ ಕುರ್ವನ್ ಪ್ರಾಚೀಂ ದಿಶಮ್ ದೂಹೇ । ಫಲದ್ವಾರೇಣ ಆಕ್ಷಾರಯಾಮಿ । ಪಿಂಡದಾನಾದಿ ಕುರ್ವನ್ ದಿಶೌ ದೂಹೇ । ಯಜಮಾನ ಬ್ರಹ್ಮಾದೀನಾಂ ಉದುಙ್ಮುಖಾನಾಂ ಕರ್ಮಾಚರಣಾತ್ ದುಹೇ । ಪ್ರತ್ಯಙ್ಮುಖತಯಾ ಜಪಾದಿಕರಣಾತ್ ಸರ್ವಾ ದುಹೇ ॥ ಸಾ ೨೩೩ ।

ಪೂರ್ವದಿಕ್ಕಿನಲ್ಲಿ ಯಜ್ಞಯಾಗಾದಿಗಳನ್ನು ಆಚರಿಸಿ ಬಂದ ಫಲದಿಂದ ಅಪವಾದಗಳನ್ನೂ ದೋಷಗಳನ್ನೂ ಸಂಪೂರ್ಣವಾಗಿ ಪರಿಹರಿಸಿಕೊಳ್ಳುತ್ತೇನೆ. ದಕ್ಷಿಣ

ದಿಕ್ಕಿನಲ್ಲಿ ಪಿತೃಗಳಿಗೆ ಪಿಂಡದಾನ ಮಾಡುವುದರಿಂದಲೂ ಉತ್ತರಾಭಿಮುಖವಾಗಿ ಯಜಮಾನನೂ ಬ್ರಹ್ಮಾದಿ ಋತ್ವಿಜರೂ ಅನುಷ್ಠಾನಮಾಡುವ ಕರ್ಮಗಳಿಂದಲೂ ಪಶ್ಚಿಮ ದಿಕ್ಕಿನಲ್ಲಿ ಜಪಾದಿಗಳನ್ನು ನೆರವೇರಿಸುವುದರಿಂದಲೂ ಬರುವ ಫಲಗಳಿಂದ ನನ್ನ ಸಮಸ್ತ ಇಷ್ಟಾರ್ಥಗಳನ್ನೂ ನೆರವೇರಿಸಿಕೊಳ್ಳುತ್ತೇನೆ । ಸಾ ೨೩೩ ॥

ಸ್ತೋಭ ಪದಪಾಠಃ : ಮನಃ ಅಜಯಿತ್–ಹೃದಯಮ್–ಅಜಯಿತ್–ಇನ್ದ್ರಃ–ಅಜಯಿತ್–ಅಹಮ್–ಅಜ್ಯೈಷಮ್ ॥ ಸಾಮ ೨೩೪ ॥

**೧೪೦.೬. ಹಾಉಹಾಉಹಾಉ । ಮನೋಽಜಯಿತ್ । ೩ । ಹೃದಯಮಜಯಿತ್ । ೩ । ಇನ್ದ್ರೋಽಜಯಿತ್ । ೩ । ಅಹಮಜ್ಯೈಷಮ್ । ೩ । ಹಾಉಹಾಉಹಾಉ । ಯದ್ವರ್ಚೋಽಹಿರಣ್ಯ । ಸ್ಯಾ ॥ ಯದ್ವಾವರ್ಚೋಽಗವಾಮು । ತಾ ॥ ಸತ್ಯಸ್ಯಬ್ರಹ್ಮಣೋಽವ । ಚಾಃ ॥ ತೇನಮಾಸಂ\ಸೃಜಾಮ । ಸಾಇ । ಹಾಉಹಾಉಹಾಉ । ಮನೋಽಜಯಿತ್ । ೩ । ಹೃದಯಮಜಯಿತ್ । ೩ । ಇನ್ದ್ರೋಽಜಯಿತ್ । ೩ । ಅಹಮಜ್ಯೈಷಮ್ । ೩ । ಹಾಉಹಾಉಹಾಉವಾ ॥ ಏ । ಮನೋಽಜಯಿದ್ಧೃದಯಮಜಯಿದಿನ್ದ್ರೋಽಜಯಿದಹಮಜ್ಯೈಷಮ್ । ೨–೩ । ಏ । ಅಹಂ\ಸುವರ್ಜ್ಯೋಽತೀಽ೨೩೪೫ಃ ॥**

*ದೀ – ೪೯ । ಪ – ೪೫ । ಮಾ – ೪೨ । ನಾ ॥ ೬.೨೩೪ ॥*

ಸ್ತೋಭ ಭಾಷ್ಯ – ಮನೋ ಹೃದಯಂಚಾತ್ಮಾನಂ ಯಥಾ ಇನ್ದ್ರೋ ಭಗವಾನ್ ಅಜಯಿತ್ ಅಜಯಿತ್ ವಶೀಕೃತವಾನ್ । ಏವಮಹಮಜ್ಯೈಷಂ ತ್ವತ್ಪ್ರಸಾದಾತ್ ವಶೀಕುರ್ಯಾಮ್ । ಸಾ ೨೩೪ ।

ಭಗವಂತನಾದ ಇನ್ದ್ರನು ನನ್ನ ಮನಸ್ಸನ್ನೂ ಹೃದಯವನ್ನೂ ತನ್ನ ವಶ ಮಾಡಿಕೊಂಡಿದ್ದಾನೆ. ಹೀಗಾಗಿ ನಿನ್ನ ಅನುಗ್ರಹದಿಂದ ನಾನು ಇನ್ದ್ರನವನಾಗಿ ಬಿಟ್ಟಿದ್ದೇನೆ. ದಹರ ವಿದ್ಯೆ - ದಹರೋಪಾಸನೆ ಛಾಂ ೮-೧.೨ ॥ ಖಂಡಗಳನ್ನು ಅರ್ಥ ಪುಷ್ಟಿಗಾಗಿ ಪರಾಂಬರಿಸಬಹುದು । ಸಾ ೨೩೪ ॥

॥ ಪ್ರಜಾಪತೇರ್ಹೃದಯಮ್ ॥ ಕಶ್ಯಪೋಽನುಷ್ಟುಪ್ ಪ್ರಜಾಪತಿಃ ॥

೧೪೦.೭. ಹಾಉಹಾಉಹಾಉ । ವಯಃ । ೩ । ವಯೋವಯಃ । ೩ । ಹಾಉಹಾಉಹಾಉ । ಯದ್ವರ್ಚ್ಚೋಹಿರಣ್ಯ । ಸ್ಯಾ ॥ ಯದ್ವಾವರ್ಚ್ಚೋಗವಾಮು । ತಾ ॥ ಸತ್ಯಸ್ಯಬ್ರಹ್ಮಣೋವ । ಚಾಃ ॥ ತೇನಮಾಸಂ೨ಸೃಜಾಮ । ಸಾ೩ । ಹಾಉಹಾಉಹಾಉ । ವಯಃ । ೩ । ವಯೋವಯಃ । ೩ । ಹಾಉಹಾಉಹಾಉ । ವಾ ॥ ಏ । ವಯೋವಯೋವಯಃ । ೨-೩ । ಏ । ಅಹಂ೨ಸುವರ್ಜ್ಯೋತೀಽ೨೩೪೫ಃ ॥ *ದೀ - ೩೪ / ಪ - ೩೩ / ಮಾ - ೩೦ / ದೌ ॥ ೭.೨೩೫ ॥*

ಸ್ತೋಭ ಭಾಷ್ಯ - ವಯಃ ಅನ್ನಂ ಅಹಂ ಸರ್ವಸ್ಯಾಪ್ಯಾಯಕಃ । ಸಾ ೨೩೫ ॥ ರೂಪದೇವಾದೀನಾಂ ಅಹಂ ಆಕೃತಿಃ । ಅರೂಪಸ್ಯಾಪ್ಯಹಂ ರೂಪಮ್ । ಅಥ ಏಷೋ ಅನ್ತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ ಇತಿ । ಪರಮೇಶ್ವರ ಸಾಕ್ಷಾತ್ಕಾರೋತ್ತರಕಾಲಂ ಸದ್ಭಾವಾಪನ್ನೋಽಹಂ । ಸಾ ೨೩೬ ॥ ಉದಪಪ್ತಂ ಜಗತ್ ಪಾಲಯಾಮಿ । ನ ಭಾಂಸ್ಯಕೃಷಿ ಪೃಥಿವ್ಯಾ ಉಪರಿ ನಭೋ ಅನ್ತರಿಕ್ಷಂ ಕರೋಮಿ । ವ್ಯದ್ಯೌತ್ಸಂ ಸೂರ್ಯೋದಯದ್ವಾರೇಣ ತಮೋ ವಿವಾಸಯಾಮಿ । ಅತತನ ಶುಭಾಶುಭ ಕರ್ಮಾನುಸಾರೇಣ ಪ್ರಾಣಿನೋ ವಿಸ್ತಾರಯಾಮಿ । ಪಿನ್ವಸ್ವ ಅಮೃತ ರಸೇನಾಪ್ಯಾಯಸ್ವ ಯಥಾ ತತ್ವ ಸಾಕ್ಷಾತ್ಕಾರೋ ಜಾಯತ ಇತ್ಯರ್ಥಃ । ೨೩೭ ॥ ಕಾರಣ ರೂಪ ಪ್ರಾಪ್ಯಾಪ್ರಥೇ ಜಗದುತ್ಪಾದಯಾಮಿ । ಪ್ರತ್ಯಷ್ಠಾಂ ಜಗತ್ಸ್ಥಿತಿಂ ಕರ್ತುಂ ಪ್ರವರ್ತೇ ಸರ್ವೋಪಸಂಹಾರೇಣ ವಾ ಅವತಿಷ್ಠೇ ಉಪತಿಷ್ಠೇ । ಸಾ ೨೩೮॥

ಅನ್ನಸ್ವರೂಪವಾಗಿ ಸರ್ವರಿಗೂ ನಾನು ಆಪ್ಯಾಯಮಾನವಾಗಿದ್ದೇನೆ. ದೇವಾಧಿ ದೇವತೆಗಳ ರೂಪವೂ ನನ್ನ ಆಕೃತಿಯೇ ಆಗಿದೆ. ರೂಪವಿಲ್ಲದವನೂ ಆಗಿದ್ದೇನೆ. ಅಹಸ್ಸಾಗಿ ಆದಿತ್ಯಾಂತರ್ಗತವಾಗಿರುವ ಹಿರಣ್ಯಗರ್ಭನಾಗಿದ್ದೇನೆ. ವಾಯು . . . ರೂಪಂ ರೂಪಂ ಪ್ರತಿರೂಪೋ ಬಭೂವ । ಏಕಸ್ತಥಾ . . . ರೂಪಂ ರೂಪಂ ಪ್ರತಿರೂಪೋ ಬಹಿಶ್ವ ॥ ಉಪಾಧಿಯಿಂದ ತೋರುವ ಕಲ್ಪಿತರೂಪವಾದ ಜೀವರೂಪದಿಂದಲ್ಲದೆ ಉಪಾಧಿಗೆ ಅಧೀನವಾಗದ ಸ್ವತಂತ್ರವಾದ ಒಬ್ಬನೇ ರೂಪಕ್ಕೂ ಪ್ರತಿರೂಪನಾಗಿ ಇರುವವನಲ್ಲದೆ ಶುದ್ಧ ಚಿನ್ಮಾತ್ರವಾದ ತನ್ನ ರೂಪದಿಂದಲೂ ಇರುತ್ತಾನೆ-ಕಠ. ೨-೨-೧೦ ॥ ಭಗವಂತನ ಸಾಕ್ಷಾತ್ಕಾರರೂಪವಾಗಿರುವ ಸದ್ಭಾವನೆಯೇ ಆದ ನಾನು ಜಗತ್ತನ್ನು ಪೋಷಿಸಿ ಪಾಲಿಸುತ್ತೇನೆ. ಪೃಥ್ವಿಯ ಮೇಲೆ ಆಕಾಶ ಅಂತರಿಕ್ಷಗಳಿರುವಂತೆ ಮಾಡಿದ್ದೇನೆ. ಸೂರ್ಯೋದಯದ ಮೂಲಕ ಕತ್ತಲನ್ನು ಕಳೆಯುತ್ತೇನೆ. ಪ್ರಾಣಿಗಳು ತಮ್ಮತಮ್ಮ ಶುಭಾಶುಭಕರ್ಮಾನುಸಾರ ತಮ್ಮ ತಮ್ಮ ಪೀಳಿಗೆಯನ್ನು ವಿಸ್ತರಿಸುವಂತೆ ಮಾಡಿದ್ದೇನೆ. ತತ್ವಸಾಕ್ಷಾತ್ಕಾರವಾಗುತ್ತಿದ್ದಂತೆಯೇ ಅಮೃತರಸದಿಂದ ಆಪ್ಯಾಯನಗೊಳಿಸುತ್ತೇನೆ. ಕಾರಣ ರೂಪವಾಗಿ ಜಗತ್ತಿನ ಸೃಷ್ಟಿ ಸ್ಥಿತಿಲಯಗಳಲ್ಲಿ ತೊಡಗಿದ್ದೇನೆ ॥ ಸಾಮ ೨೩೫ – ೨೩೮ ॥

೧೪೦.೮. ಹಾಉಹಾಉಹಾಉ । ರೂಪಮ್ । ೩ । ರೂಪಂ
ರೂಪಮ್ । ೩ । ಹಾಉಹಾಉಹಾಉ । ಯದ್ವರ್ಚೋ೭ಹಿರಣ್ಯ ।
ಸ್ಯಾ ॥ ಯದ್ವಾವರ್ಚೋ೭ಗವಾಮು । ತಾ ॥ ಸತ್ಯಸ್ಯಬ್ರಹ್ಮಣೋವ ।
ರ್ಚಾಃ ॥ ತೇನಮಾಸಂಸೃಜಾಮ । ಸಾಇ । ಹಾಉಹಾಉಹಾಉ ।
ರೂಪಮ್ । ೩ । ರೂಪ ಂರೂಪಮ್ । ೩ । ಹಾಉಹಾಉ
ಹಾಉ । ವಾ ॥ ಏ । ರೂಪಂರೂಪಂರೂಪಮ್ । ೨-೩ । ಏ ।
ಅಹಂಸುವರ್ಜ್ಯೋ೭ತೀ೭೨೩೪೫ಃ ॥

*ದೀ – ೪೯ । ಪ – ೩೩ । ಮಾ – ೩೦ । ದೌ ॥ ೮.೨೩೭ ॥*

ಸ್ತೋಭ ಪದಪಾಠಃ – ಹಿ-ಯಃ-ಉ-ಉತ್-ಅಪಪ್ತಮ್-ಊರ್ಧ್ವಾ-ನಭಾಂಸಿ –ಅಕೃಷಿ-ವಿ-ಅದ್ಯೌತ್ಸಮ್-ಅತತನಮ್-ಪಿನ್ವಸ್ವ ॥ ಸಾ ೨೩೭ ॥

೧ ೨ — ೦
೧೪೦.೯. ಹಿಹಿಯಊಽ೨ । ೩ । ಉದಪಪ್ತಮ್ । ೩ । ಊ
೧೦ ೦ ೨ ೧ ೨೦ ೧ ೨
ರ್ಧ್ವಾನಭಾಜ್‌ಸ್ಯಕೃಷಿ । ೩ । ವ್ಯದೌತ್ಸಮ್ । ೩ । ಅತತನಮ್ ।
೨೦ ೦ ೦ ೧ ೨೦ ೧ ೨ ೧
೩ । ಹಾಉಹಾಉಹಾಉ । ಯದ್ವರ್ಚೋ೯ಹಿರಣ್ಯ । ಸ್ಯಾ ॥ ಯ
೨೦ ೧ ೨೦ ೧ ೦ ೨ ೧ ೨ ೧ ೨ ೧ ೨೦ ೧
ದ್ವಾವರ್ಚೋ೯ಗವಾಮು । ತಾ ॥ ಸತ್ಯಸ್ಯಬ್ರಹ್ಮಣೋ೯ವ । ಚಾಃ ॥
೦ ೨೦ ೧ ೨೦ ೧ ೨ — ೧
ತೇನಮಾಸಂ೪ಸೃಜಾಮ । ಸಾಇ । ಹಿಹಿಯಊಽ೨ । ೩ । ಉದ
೨ ೦ ೧೦ ೦ ೨ ೧ ೨೦
ಪಪ್ತಮ್ । ೩ । ಊರ್ಧ್ವಾನಭಾಜ್‌ಸ್ಯಕೃಷಿ । ೩ । ವ್ಯದೌತ್ಸಮ್ ।
೧ ೨ ೦ ೧
೩ । ಅತತನಮ್ । ೩ । ಹಾಉಹಾಉಹಾಉ । ವಾ ॥ ಏ । ಉ
೨ ೦ ೧೦ ೦ ೨ ೧ ೨೦ ೧ ೨
ದಪಪ್ತಮೂರ್ಧ್ವಾನಭಾಜ್‌ಸ್ಯಕೃಷಿವ್ಯದೌತ್ಸಮತತನಮ್ । ೨–೩ ।
೨ ೧ ೩ ೧ ೧ ೧
ಏಽ೩ । ಪಿನ್ವಸ್ವಾಽ೨೩೪೫ ॥

*ದೀ – ೫೦ । ಪ – ೪೯ । ಮಾ – ೩೫ । ಘು ॥ ೯.೨೩೭ ॥*

೧೨೦ ೧೨೦ ೧೨೦ ೩
ಸ್ತೋಭ ಪದಪಾಠ ಃ ಪ್ರಥೇ–ಪ್ರತ್ಯಷ್ಠಾಮ್–ಪ್ರತಿ–ಅಸ್ಥಾಮ್ ॥

೨೦ ೦ ೦ ೧ ೦ ೨೦
೧೪೦.೧೦. ಹಾಉಹಾಉಹಾಉ । ಪ್ರಥೇ । ೩ । ಪ್ರತ್ಯಷ್ಠಾಮ್ ।
೨೦ ೦ ೦ ೧ ೨೦ ೧ ೨ ೧ ೧
೩ । ಹಾಉಹಾಉಹಾಉ । ಯದ್ವರ್ಚೋ೯ಹಿರಣ್ಯ । ಸ್ಯಾ ॥ ಯ
೨೦ ೧ ೨೦ ೧ ೦ ೨ ೧ ೨ ೧ ೨ ೧ ೨೦ ೧
ದ್ವಾವರ್ಚೋ೯ಗವಾಮು । ತಾ ॥ ಸತ್ಯಸ್ಯಬ್ರಹ್ಮಣೋ೯ವ । ಚಾಃ ॥
೦ ೨೦ ೧ ೨೦ ೧ ೨೦ ೦ ೦ ೧ ೦
ತೇನಮಾಸಂ೪ಸೃಜಾಮ । ಸಾಇ । ಹಾಉಹಾಉಹಾಉ । ಪ್ರಥೇ ।
೨೦ ೦ ೧
೩ । ಪ್ರತ್ಯಷ್ಠಾಮ್ । ೩ । ಹಾಉ ಹಾಉಹಾಉ ॥ ವಾ । ಏ । ಪ್ರ

೦ ೨೦ ೦ ೧ ೦ ೩ ೧೧
ಥೇಪ್ರತ್ಯಷ್ಠಾಮ್ । ೨-೩ । ಏ । ಅಹೌ\ಸುವರ್ಜ್ಯೋತೀಽ೨೩೪
೧
೫ಃ ॥ *ದೀ - ೪೦ / ಪ - ೩೩ / ಮಾ - ೨೪ / ಬೀ ॥ ೧೦.೨೩೮ ॥*

ದಶ ಸಪ್ತಮಃ ಖಣ್ಡಃ ॥ ೭ ॥

ಸಾಯಣ ಭಾಷ್ಯ – ಹಿರಣ್ಯಸ್ಯ ಹಿತರಮಣೀಯಸ್ಯ ಏತನ್ನಾಮಕಸ್ಯ ಯದ್ವರ್ಚಃ ತೇಜೋಽಸ್ತಿ । ಯದ್ವಾ ಅಪಿ ಚ ಗವಾಮ್ ಏತನ್ನಾಮಕಾನಾಂ ಯದ್ವರ್ಚಃ ತೇಜೋಽಸ್ತಿ । ಉತ ಅಪಿ ಚ ಸತ್ಯಸ್ಯ ಸರ್ವೈಃ ಸಂಮತಸ್ಯ ಬ್ರಹ್ಮಣಃ ಯದ್ವರ್ಚೋಽಸ್ತಿ ತೇನ ತ್ವೈಃ ಸಂಸೃಜಾಮಸಿ ಸಂಪಾದಯಾಮಃ । ಧನವನ್ತಃ ಪಶುಮನ್ತಃ ಶ್ರೋತ್ರಿಯಾ ಭವೇಮೇತಿ ತಾತ್ಪರ್ಯಾರ್ಥಃ ॥

**ಹಿರಣ್ಯಸ್ಯ** ಹಿತಕಾರಿಯೂ ರಮಣೀಯವೂ ಆದ ಸುವರ್ಣದ – ಹಿರಣ್ಯಂ ಕಸ್ಮಾದುದ್ಧ್ರಿಯತ ಆಯಮ್ಯಮಾನಮಿತಿ ವಾ ಹ್ರಿಯತೆ ಜನಾಜ್ಜನಮಿತಿ ವಾ ಹಿತ ರಮಣಂ ಭವತೀತಿ ವಾ ಹೃದಯ ರಮಣಂ ಭವತೀತಿವಾ ಹರ್ಯತೇರ್ವಾಸ್ಯಾತ್ ಪ್ರೇಪ್ಸಾ ಕರ್ಮಣಃ ನಿರು ೨-೧೦ । **ಯತ್ ವರ್ಚಃ** ಯಾವ ತೇಜಸ್ಸು ಸೌಂದರ್ಯ ಆಕರ್ಷಣೆಗಳಿವೆಯೋ – ಸುವರ್ಣೇ ಯದ್‌ವರ್ಚೋಮಯಿ ಶ ೧೨-೧ । **ಯತ್ ವಾ** ಮತ್ತು ಯಾವ **ಗವಾಮ್–ಉತ** ಸೂರ್ಯಕಿರಣಗಳ ಹೊಳೆಯುವ ಮತ್ತು ಬೆಳಗುವ ತೇಜಸ್ಸು ವರ್ಚಸ್ಸುಗಳಿವೆಯೋ – ಸೂರ್ಯಸ್ಯ ವರ್ಚಸಾ ವರ್ಚಸ್ವೀ ಭೂಯಾಸಮ್ ಕಾಠ ೫-೫ । ವೇದವಾಣಿಯ ಜ್ಞಾನರೂಪವಾದ ವರ್ಚಸ್ಸು ತೇಜಸ್ಸು – ಗೋಷು ಯದ್ವರ್ಚೋಮಯಿ ಶಾಂಖಾ ೧೨-೧ । ಗೌಃ ವಾಙ್‌ನಾಮ ನಿಘಂ ೧-೧೧ ॥ **ಸತ್ಯಸ್ಯ ಬ್ರಹ್ಮಣಃ ವರ್ಚಃ** ಸತ್ಯ ಸ್ವರೂಪನಾದ ಭಗವಂತನ ವರ್ಚಸ್ಸಾದ ಆನಂದ ಸ್ವರೂಪವು **ತೇನ** ಅವುಗಳಿಂದ **ಮಾ** ನನ್ನನ್ನು **ಸಂಸೃಜಾಮಸಿ** ನನ್ನಲ್ಲಿ ಸಮಾವೇಶಗೊಳ್ಳುವಂತೆ ನನ್ನನ್ನು ಅಲಂಕರಿಸುವಂತೆ ಅನುಗ್ರಹಿಸು.

ಭಗವಂತನೇ ಸುವರ್ಣದ ಆಕರ್ಷಣೆ ಸೌಂದರ್ಯಗಳೂ ಸೂರ್ಯ ಕಿರಣಗಳ ತೇಜಸ್ಸೂ ವೇದದ ಜ್ಞಾನಸ್ವರೂಪವೂ ಬ್ರಹ್ಮವರ್ಚಸ್ಸೆನಿಸಿರುವ ಆನಂದವೂ ನನ್ನಲ್ಲಿ ಸಮಾವೇಶವಾಗಿ ನನ್ನದಾಗುವಂತೆ ಅನುಗ್ರಹಿಸು. ಭೋಜನಕ್ಕಾಗಿ ಒದಗಿ ಬಂದಿರುವ ಜೀವಪ್ರದವಾದ ಅನ್ನವೂ ಅನ್ನಕ್ಕಿರುವ ಭೋಜನ ಸಾಮರ್ಥ್ಯವೂ ಜೀವನಪ್ರದಶಕ್ತಿಯೂ ಭೋಜನವೂ ಅನ್ನವನ್ನು ಸ್ವೀಕರಿಸಿ ಭೋಜನ ಮಾಡುವವನೂ ಭೋಗಿಸುವವನೂ ನಾನೇ ಆಗಿದ್ದೇನೆ. ಸಮಸ್ತ ವಿಶ್ವವನ್ನೂ ಧರಿಸಿರುವವನೂ ಭುಂಜಿಸುವವನೂ ಅಂದರೆ ಭೋಕ್ತೃ ಭೋಜ್ಯ ಭೋಗ್ಯ ಭಾವಗಳಿಂದ ಎಲ್ಲವೂ ನಾನೇ ಆಗಿದ್ದೇನೆ – ಎಂದು ತಿಳಿದವನು ಹಿರಣ್ಯ ಪ್ರತೀಕವಾದ ಮಹದೈಶ್ವರ್ಯದಿಂದ ಲಭಿಸುವ ಸ್ಥೈರ್ಯ ಧೈರ್ಯಗಳೆಂಬ ದೀಪ್ತಿಯೂ ಗೋ ಪ್ರತೀಕವಾದ ಹಾಲು ತುಪ್ಪ ಆದಿ ಗವ್ಯ

ಪದಾರ್ಥಗಳಿಂದ ದೇವತಾ ಪ್ರೀತ್ಯರ್ಥವಾಗಿ ಆಚರಿಸಿದ ಯಜ್ಞಗಳಿಂದ ಪ್ರಾಪ್ತವಾಗುವ ದೈವೀ ಸಂಪತ್ತಿನ ತೇಜಸ್ಸೂ ಸತ್ವಾದಿ ತಪಸ್ಸಿನಿಂದುದ್ಭವಿಸುವ ಬ್ರಹ್ಮವರ್ಚಸ್ಸೂ – **ಆತ್ಮಾನಂ ಸಂಸೃಜಾಮಸಿ । ಐಕ್ಯಾರ್ಥಮಾಪದ್ಯೇಮಹಿ ।** ಚಿದಾನಂದ ಪ್ರಕಾಶದಲ್ಲಿ ಐಕ್ಯವಾಗಿದೆ ಎಂದು ಅನುಭವಿಸಿದ ಋಷಿಯು ಪುಳಕಿತನಾಗಿ ಆನಂದೋದ್ಗಾರ ಮಾಡುತ್ತಾನೆ. **ಹಾಉ** ಕಾರವು ಈ ಲೋಕವನ್ನೂ ಏ ಕಾರವು ಆಹ್ವಾನವನ್ನೂ ಸೂಚಿಸುತ್ತವೆ. ಸುವಃ ಪ್ರಕಾಶದ ಜ್ಯೋತಿ ಚಿಚ್ಛಕ್ತಿಯ ಪ್ರಬೋಧದ ಸಂಕೇತವಾಗಿದೆ.

*ಗೋಗಳೊಳ್ ಸಂದ ಸತ್ವಂ ಮೇಣ್*
*ಪೊನ್ನಿನೊಳ್ ಸಂದ ಕಾಂತಿ ಮೇಣ್ ।*
*ಬ್ರಹ್ಮದೊಳ್ ಸಂದ ಸತ್ವಂ ಮೇಣ್*
*ಸಲ್ಲಿಕೆಮ್ಮಯ ಬೇಳ್ವೆಯಂ ॥*

॥ ಕಶ್ಯಪವ್ರತಮ್ ದಶಾನುಗಾನಮ್ । ಕಶ್ಯಪೋಗಾಯತ್ರೀನ್ದ್ರಃ ॥

**೧೪೧.೧. ಹಾಉಹಾಉಹಾಉ । ಹಾऽ೨ಇ । ಊऽ೨ । ೨–೩ । ಕಾಹ್ವಹ್ವಹ್ವಹ್ವ । ೩ । ಹಾऽ೨ಇ । ಊऽ೨ । ಊऽ೨ । ಊऽ೨ । ೪–೩ । ಕಾಹ್ವಹ್ವಹ್ವಹ್ವ । ಊऽ೨ । ೨–೩ । ಹಾಉಹಾಉಹಾಉ । ಯಸ್ಯೇದಮಾರಜೋ಼ಯೂऽ೨ಜಾಃ ॥ ತುಜೇಜನೇವನ೮\ಸೂऽ೨ವಾಃ ॥ ಹಾಉಹಾಉಹಾಉ । ಹಾऽ೨ಇ । ಊऽ೨ । ೨–೩ । ಕಾಹ್ವಹ್ವಹ್ವಹ್ವ । ೩ । ಹಾऽ೨ಇ । ಊऽ೨ । ಊऽ೨ । ಊऽ೨ । ೪–೩ । ಕಾಹ್ವಹ್ವಹ್ವಹ್ವ । ಊऽ೨ । ೨–೩ । ಹಾಉಹಾಉಹಾಉ । ಆಇನ್ದ್ರಸ್ಯರ ॥ ತಿಯಾऽ೩ಮ್ಬ್ಯುऽ೩ಹಾऽ೬೫೬ತ್ ॥ ನಮಸ್ಸುವರಿಡಾऽ೨೩೪೫ ॥**

*ದೀ – ೧೭ । ಪ – ೬೩ । ಮಾ – ೨೮ । ಜೈ ॥ ೧೧.೨೩೯ ॥*

ಈ ೨೩೭ನೆಯ ಸಾಮಗಾನವು ಯಸ್ಯೇದಮಾರಜಃ ೫೮೮ನೆಯ ಋಕ್ ಮೇಲೆ ಅಧಿಷ್ಠಿತವಾಗಿದೆ. ಈ ಗಾನದಲ್ಲಿ ಊ ಮೇಲಿರುವ ೧೧ ಚಿಹ್ನೆಯು ಕರುಣಾ ಶ್ರುತಿಯನ್ನು ಸಂಕೇತಿಸುತ್ತದೆ.

೧೨೦ ೩ ೧೨ ೩೦ ೧೨ ೩೦ ೧೨ ೩ ೨ ೩ ೨
ಸ್ತೋಭ ಪದಪಾಠಃ – ಕ ಹ್ವ–ಅಹೋಇತಿ–ಆಹೋಇತಿ–ಏಹೋಇತಿ–ಪ್ರಜಾಃ –ಪ್ರ–ಜಾಃ
೩ ೨ ೩
–ಭೂತಮ್–ಅಜೀಜನೇ ॥

॥ ಕಶ್ಯಪಗ್ರೀವಾ । ದಶಾನುಗಾನಮ್ । ದ್ವಿತೀಯಮ್ । ಕಶ್ಯಪೋಽನುಷ್ಟುಬಿನ್ದ್ರಃ ॥

**೧೪೧.೨. ಹಾಉಹಾಉಹಾಉ ॥ ಅಹೋಅಹೋ । ಅಹೋ । ಆಹೋಆಹೋ । ಆಹೋ ॥ ಏಹೋಏಹೋ ॥ ಏಹೋ । ವಾಽ೩ । ಹಾಉವಾಽ೩ ॥ ಪ್ರಜಾಭೂತಮಜೀಜನೇಽ೩ । ಇಟ್ ಸ್ಥಿ ಇಡಾಽ೨೩೪೫** ॥*ದೀ – ೬ / ಪ – ೧೧ / ಮಾ – ೮ / ಕೈ // ೧೨.೨೪೦ //*

॥ ಕಶ್ಯಪವ್ರತಮ್ । ದಶಾನುಗಾನಮ್ । ತೃತೀಯಮ್ । ಕಶ್ಯಪಸ್ತ್ರಿಷ್ಟುಬಿನ್ದ್ರಃ ॥

**೧೪೨.೧. ಹಾಉಹಾಉಹಾಉ । ಫಾಲ್ಫಲ್ಫಲ್ಫಲ್ಫಲ್ ಫಲ್ । ೩ । ಹಾಉಹಾಉಹಾಉ । ಇನ್ದ್ರನ್ನರೋನೇಮಧಿತಾ ಹವಾಽ೨ನ್ತಾಇ ॥ ಯತ್ಪಾರ್ಯಾಯುನಜತೇಧಿಯಾಽ೨ಸ್ತಾಃ ॥ ಶೂ ರೋನೃಷಾತಾಶ್ರವಸಶ್ಚಕಾಽ೨ಮಾಇ ॥ ಆಗೋಮತಿವ್ರಜೇಭಜಾತು ವಾಽ೨ನ್ನಾಃ । ಹಾಉಹಾಉಹಾಉ । ಫಾಲ್ಫಲ್ಫಲ್ಫಲ್ಫಲ್ ಫಲ್ । ೩ । ಹಾಉಹಾಉಹಾಉ । ವಾ ॥ ಮನಸ್ಸುವರಿಡಾಽ೨೩ ೪೫** ॥ *ದೀ – ೨೩ / ಪ – ೧೬ / ಮಾ – ೫೨ / ಟಾ // ೧೩.೨೪೧ //*

ಈ ೨೪೧ನೆಯ ಸಾಮಗಾನವು ಇನ್ದ್ರನ್ನರೋ ನೇಮಧಿತಾ ೩೧೮ನೆಯ ಋಕ್ ಮೇಲೆ ಅಧಿಷ್ಠಿತವಾಗಿದೆ.

॥ ಕಶ್ಯಪವ್ರತಮ್ ॥ ದಶಾನುಗಾನಮ್ । ಚತುರ್ಥಮ್ । ಕಶ್ಯಪಃ ॥ ತ್ರಿಷ್ಟುಬಿನ್ದ್ರಃ ॥

**೧೪೩.೧. ಹಾಉಹಾಉಹಾಉ । ಹಾಉಹೌಹೌಹೌಹೌ । ೩ । ಹಾಉಹಾಉಹಾಉ । ಯೋೀನೋೀವನುಷ್ಯನ್ನಭಿದಾತಿಮಾಽ೨ರ್ತ್ತಾಃ ॥ ಉಗಣಾವಾಮನ್ಯಮಾನಸ್ತುರೋಽ೨ವಾ ॥ ಕ್ಷಿಧೀಯುಧಾಶವಸಾ ವಾತಮಾಽ೨ಇನ್ದ್ರಾ ॥ ಅಭೀಷ್ಯಾಮವೃಷಮಣಸ್ತ್ವೋೀಽ೨ತಾಃ । ಹಾಉಹಾಉಹಾಉ । ಹಾಉಹೌಹೌಹೌಹೌ । ೩ । ಹಾಉ ಹಾಉಹಾಉ । ವಾ ॥ ಏವಯಸ್ಸುವರಿ ಡಾಽ೨೩೪೫ ॥**

*ದೀ - ೫೨ । ಪ - ೧೬ । ಮಾ - ೨೧ । ಚ ॥ ೧೪.೨೪೨ ॥*

ಈ ೨೪೨ನೆಯ ಸಾಮಗಾನವು ಯೋನೋವನುಷ್ಯನಭಿಧಾಶಿ ೩೩೬ ಋಕ್ ಮೇಲೆ ಅಧಿಷ್ಠಿತವಾಗಿದೆ.

ಸ್ತೋಭ ಪದಪಾಠಃ–ಇಮಾಃ–ಪ್ರಜಾಃ–ಪ್ರ–ಜಾಃ–ಪ್ರಜಾಪತೇ–ಪ್ರಜಾ–ಪತೇ–ಹೃದಯಮ್ –ಪ್ರಜಾಃ–ಪ್ರ–ಜಾಃ–ರೂಪಮ್–ಅಜೀಜನೇ ॥

॥ ಪ್ರಜಾಪತೇರ್ಹೃದಯಮ್ । ಕಶ್ಯಪವ್ರತಂ ದಶಾನುಗಾನಂ । ಪಂಚಮಮ್ । ಕಶ್ಯಪೋಽನುಷ್ಟುಪ್ ಪ್ರಜಾಪತಿಃ ॥

**೧೪೩.೨. ಹಾಉಹಾಉಹಾಉ । ಇಮಾಃ । ೩ । ಪ್ರಜಾಃ । ೩ । ಪ್ರಜಾಪತೇ । ಹೋೀಇ । ೨–೨ ॥ ಪ್ರಜಾಪತೇ । ಹಾಽ೩೧ಉ । ವಾಽ೨ ॥ ಏ । ಹೃದಯಮ್ । ೨–೨ । ಏ । ಹೃದಯಾಽ೩೧**

—      ೧೦ ೦      ೨೦      ೧
ಉ । ವಾऽ೨ ॥ ಪ್ರಜಾರೂಪಮಜೀಜನೇऽ೩ । ಇಟ್ ಸ್ಥಿ ಇಡಾऽ
೧೧೧
೨೩೪೫ ॥ *ದೀ - ೨೧ / ಪ - ೨೩ / ಮಾ - ೧೬ / ಗೂ ॥ ೧೫.೨೪೩ ॥*

॥ ಕಶ್ಯಪವ್ರತಂ ದಶಾನುಗಾನಮ್ ॥ ಇಡಾನಾಂಸಂಕ್ಷಾರಃ ॥ ಷಷ್ಠಃ ॥ ಕಶ್ಯಪೋऽನುಷ್ಟುಪ್ಪ್ರಜಾಪತಿಃ ॥

೨೦ ೦ ೦ ೧ ೦
೧೪೩.೩. ಹಾಉಹಾಉಹಾಉ । ಇಡಾ । ೩ । ಸುವಃ ॥ ೩ ॥
೦ ೩೦ ೨ ೫೦ ೦ ೨೦ ೧ ೦
ಜ್ಯೋತಿಃ । ೨ ॥ ಜ್ಯೋತಾऽ೩೪ । ಔಹೋವಾ ॥ ಏ । ಇಡಾ
೦ ೩ ೧೧೧
ಸುವರ್ಜ್ಯೋತೀऽ೨೩೪೫ಃ ॥

*ದೀ - ೧೪ / ಪ - ೧೩ / ಮಾ - ೯ / ದೋ ॥ ೧೬.೨೪೪ ॥*

ಸ್ತೋಭ ಭಾಷ್ಯ - ಕಂ ಉದಕಂ ಹ್ವಯತಿ ಆನಯತೀತಿ ಕಹ್ವಃ ಇಂದ್ರಃ । ನಮೋನ್ನಂ ಸ್ವಃ ಪ್ರಕಾಶಃ ಇಡಾ ಧನಮ್ ಇಂದ್ರಪ್ರಸಾದಾತ್ । ಸಾ ೨೩೯ ॥ ಅಹೋ ಆಹೋ ಏಹೋ । ಮಹದಿದಂ ಆಶ್ಚರ್ಯಂ । ಭಗವಾನ್ ಇಂದ್ರಃ ಪ್ರಜಾ ಭೂತಂ ಚೇತನಮಚೇತನಂ ಚ ಅಜೀಜನೇ ಜನಯತೀತಿ । ಸಾ೨೪೦ ॥ ಫಲ್ ಸಂಕಲ್ಪ ಮಾತ್ರೇಣ ನಿಷ್ಪಾದಯತಿ । ಮನಃ ಸ್ವಃ ಇಡಾ ಚ ತದಧೀನಮ್ ॥ ೨೪೧ ॥ ಹೌ ಹವನೇ ಚ ಯುಕ್ತಾಃ ಸ್ಯಾಮ । ವಯಃ ಸ್ವಃ ಇಡಾ ಚ ಅಸ್ಮಾಕಂ ಭವೇತ್ । ಪ್ರಜಾಪತಿ ಸಂಕಲ್ಪಾಜ್ಜಾತತ್ವಾತ್ । ೨೪೨ ॥ ಯತಃ ಪ್ರಜಾರೂಪಂ ಶರೀರಮಜೀಜನೇ ಜನಯತಿ । ಪುರಶ್ಚಕ್ರೇ ದ್ವಿಪದಃ ಪುರಶ್ಚಕ್ರೇ ಚತುಷ್ಪದಃ ಇತಿ ಶ್ರುತೇಃ । ಸಾ ೨೪೩ ॥ ಇಡಾ ಸ್ವಃ ಈರಯತ್ಯನ್ನಾನಿ । ಜ್ಯೋತಿಃ ಪ್ರಕಾಶಕಃ ಇಂದ್ರಃ । ಸಾ ೨೪೪ ॥

ನೀರನ್ನು ತರುವುದರಿಂದ ಇಂದ್ರನಿಗೆ ಕಹ್ವಃ ಎಂದಿದೆ. ಅನ್ನವೂ ಧನವೂ ಪ್ರಕಾಶವೂ ಇಂದ್ರನ ಅನುಗ್ರಹದಿಂದ ನಮಗೆ ಸಿಗುವುದರಿಂದ ಇಂದ್ರನನ್ನು ನಮಸ್ಕರಿಸುತ್ತೇವೆ. ಭಗವಂತನಾದ ಇಂದ್ರನು ಚೇತನಾಚೇತನಜಗತ್ತನ್ನು ಸೃಷ್ಟಿಸುತ್ತಿರುವುದು ವರ್ಣಿಸಲಾರದಂತಹ ಮಹದಾಶ್ಚರ್ಯವಾಗಿದೆ. ಮನಸ್ಸು ಪ್ರಕಾಶ ಅನ್ನ ಅವನಧೀನ ವಾಗಿದ್ದು ಸಂಕಲ್ಪ ಮಾತ್ರದಿಂದ ಫಲವನ್ನುಂಟುಮಾಡುವದು ಬೆರಗುಗೊಳಿಸುತ್ತದೆ. ಯಜ್ಞದಲ್ಲಿ ಇಂದ್ರನನ್ನು ಆಹ್ವಾನಿಸಿ ಹವಿಸ್ಸನ್ನರ್ಪಿಸುವುದರಿಂದ ಅವನ ಸಂಕಲ್ಪಾಧೀನ ವಾಗಿರುವ ಅನ್ನ ಪ್ರಕಾಶ ಬುದ್ಧಿಗಳು ನಮ್ಮದಾಗುತ್ತವೆ. ಸರ್ವರ ಹೃದಯವಾಸಿಯಾದ ಪ್ರಜಾಪತಿಯು ಪ್ರಜಾರೂಪವಾದ ಶರೀರಗಳನ್ನು ಸೃಷ್ಟಿಸಿರುವುದು ಶ್ರುತಿ ಪ್ರಸಿದ್ಧವೇ ಆಗಿದೆ. ಇಂದ್ರನೇ ಮನಸ್ಸನ್ನೂ ಪ್ರಕಾಶವನ್ನೂ ಅನ್ನವನ್ನೂ ಸೃಷ್ಟಿಸಿದ್ದಾನೆ ॥ ಸಾ ೨೩೯-೨೪೪ ॥

॥ ವಾಮದೇವೋಗೌತಮಃ ತ್ರಿಷ್ಟುಬಿನ್ದ್ರಃ ॥

ಸಹಸ್ತನ್ನ ಇನ್ದ್ರ ದದ್ಧ್ಯೋಜ ಈಶೇ ಹ್ಯಸ್ಯ ಮಹತೋ ವಿರಪ್ಶಿನ್ । ಕ್ರತುಂ ನ ನೃಮ್ಣಂ ಸ್ಥವಿರಂ ಚ ವಾಜಂ ವೃತ್ರೇಷು ಶತ್ರೂನ್ತ್ಸುಹನಾ ಕೃಧೀ ನಃ ॥ ೧೧-೬೨೫ ॥

ಸಹಃ–ತತ್–ನಃ–ಇನ್ದ್ರ–ದದ್ಧಿ–ಓಜಃ । ಈಶೇ–ಹಿ–ಅಸ್ಯ–ಮಹತಃ–ವಿರಪ್ಶಿನ್ –ವಿ–ರಪ್ಶಿನ್ ॥ ಕ್ರತುಮ್–ನ–ನೃಮ್ಣಮ್–ಸ್ಥವಿರಮ್–ಸ್ಥ–ವಿರಮ್–ಚ–ವಾಜಮ್ । ವೃತ್ರೇಷು–ಶತ್ರೂನ್–ಸುಹನಾ–ಸು–ಹನಾ–ಕೃಧಿ–ನಃ ॥

॥ ಕಶ್ಯಪವ್ರತಂ ದಶಾನುಗಾನಮ್ । ಪ್ರಥಮಮ್ । ಕಶ್ಯಪಸ್ತ್ರಿಷ್ಟುಬಿನ್ದ್ರಃ ॥

೧೪೪.೧. ಹಾಉಹಾಉಹಾಉ । ಆಇಹೀ । ೩ । ಓಹಾ । ೨ । ಓಹಾಽ೩ । ಹಾಉಹಾಉಹಾಉ । ಸಹಸ್ತನ್ನಇನ್ದ್ರದಧ್ಯೋಽ೨ಜಾಃ । ಆಯಾಽ೨ಉ । ಊ । ಆಯಾಉ । ೩–೩ ॥ ಈಶೇಹ್ಯಸ್ಯಮಹತೋವಿರಾಽ೨ಪ್ಶಾಇನ್ । ಆಯಾಽ೨ಉ । ಊ । ಆಯಾಉ । ೩–೩ ॥ ಕ್ರತುನ್ನನೃಮ್ಣಂಸ್ಥವಿರಞ್ಚವಾಽ೨ಜಾಮ್ । ಆಯಾಽ೨ಉ । ಊ । ಆಯಾಉ । ೩–೩ । ವೃತ್ರೇಷುಶತ್ರೂನ್ತ್ಸುಹನಾಕೃಧಾಽ೨ಇನಾಃ । ಆಯಾಽ೨ಉ । ಊ । ಆಯಾಉ । ೩–೩ ॥ ಹಾಉಹಾ

೦ ೧ ೨ ೧ ೨ ೧ ೨ ೨೦
ಉಹಾಉ । ಆಇಹೀ । ೩ । ಓಹಾ । ೨ । ಓಹಾ೨೩ । ಹಾಉ
೦ ೦ ೨೦ ೦ ೧೦ ೨೧ ೨ ೦ ೧೦
ಹಾಉಹಾಉ । ವಾ ॥ ಏ । ಆಯುರ್ದ್ಧಾಅಸ್ಮಭ್ಯಂವರ್ಚೋಧಾ
೦ ೦ ೩ ೧೧೧
ದೇವೇಭ್ಯಾ೨೩೪೫ಃ ॥

*ದೀ – ೪೬ । ಪ – ೫೯ । ಮಾ – ೫೧ । ಘ ॥ ೧೭೨೪೫ ॥*

ಸ್ತೋಭ ಭಾಷ್ಯ – ಇನ್ದ್ರ ವಿರಪ್ಶಿನ್ ವಜ್ರಿನ್ ಸಹಃ ಓಜಶ್ಚ ತತ್ ದಧಿ ಧಾರಯ । ಹಿ ಯಸ್ಮಾತ್ ಅಸ್ಯ ಮಹತೋ ಜಗತಃ ತ್ವಮೀಶೇ ಐಶ್ವರ್ಯಮ್ ಅನುಭವಸಿ ವೃತ್ರೇಷು ಮಧ್ಯೇ ನಃ ಅಸ್ಮಾಕಂ ಶತ್ರೂನ್ ಶಾಸ್ತ್ಯಾನ್ ಸುಹನಾಕೃಧಿ ಸುಹನಾನ್ ಕುರು । ಕ್ರತುನ್ನ ನೃಮ್ಣಂ ಸುಕರಮಿವ ಕರ್ಮ ಅವಹೇಲಯಾ ಕುರು । ಸ್ಥವಿರಂ ಚ ವಾಜಂ ಸುಪಕ್ವಮಿವ ಚಾನ್ನಂ ದ್ರಾಕ್ಷಾದಿಫಲಂ ಭಕ್ಷ್ಯತೇ ಸುಖೇನ ತದ್ವತ್ ಶತ್ರೂನ್ ಅಯತ್ನೇನ ನಾಶಯೇತ್ಯರ್ಥಃ ॥ ಸಾ ೨೪೫ ॥

ಈ ಮಹಾಜಗತ್ತಿನ ಒಡೆಯನಾಗಿ ಮಹದೈಶ್ವರ್ಯವನ್ನನುಭವಿಸುವ ಸಂಕೇತವಾಗಿ ಇನ್ದ್ರ ಭಗವಂತನೇ ವಜ್ರಾಯುಧವನ್ನು ಧರಿಸು. ಸಾಧಾರಣ ಕರ್ಮವನ್ನು ನೆರವೇರಿಸುವುದಕ್ಕಿಂತ ಮುಂಚೆ ನಮ್ಮನ್ನು ಸುತ್ತಲೂ ಆವರಿಸಿರುವ ಶತ್ರುಗಳನ್ನು ತಿರಸ್ಕರಿಸಿ – ವೃದ್ಧರು ಪಕ್ವವಾಗಿರುವ ಅನ್ನಾದಿ ಆಹಾರಗಳನ್ನೂ ದ್ರಾಕ್ಷಿ ಆದಿ ಫಲಗಳನ್ನೂ ಅನಾಯಾಸವಾಗಿ ಪ್ರಯತ್ನವಿಲ್ಲದೆ ತಿನ್ನುವಷ್ಟು ಸರಾಗವಾಗಿ ನಾಶಪಡಿಸು ॥ ಸಾ ೨೪೫ ॥

ಸಾಯಣ ಬಾಷ್ಯ – ಹೇ ವಿರಪ್ಶಿನ್ ವಿಶೇಷೇಣ ರಪಣಂ ಸತ್ಯವಚನಂ ತದಸ್ಯಾಸ್ತೀತಿ ವಿರಪ್ಶೀ । ತಸ್ಯ ಸಂಬೋಧನಮ್ । ಹೇ ವಿರಪ್ಶಿನ್ ವಿಶೇಷೇಣ ಸ್ತೋತ್ರ ವಿಷಯೇ ಸತ್ಯವಾಕ್ಯ। ಇನ್ದ್ರ ತೇ ತವ ಸಹಃ ಶತ್ರೂಣಾಮಭಿಭವನರೂಪಮ್ ಓಜಃ ಬಲಂ ನಃ ಅಸ್ಮಭ್ಯಂ ದದ್ಧಿ ದೇಹಿ । ದಧಾತೇಶ್ಛಾನ್ದಸಂ ರೂಪಂ ಲೋಟಿ ಹೇರ್ಧಿ ಭಾವಾದಿನಾ । ಯಸ್ಮಾತ್ ತ್ವಂತಸ್ಯ ಅಸ್ಯ ಮಹತಃ ಬಲಸ್ಯ ಈಶೇ ಈಶ್ವರೋ ಭವಸಿ । ಅತೋ ಹೇ ಇನ್ದ್ರ ನಃ ಅಸ್ಮಾಕಂ ಕ್ರತುಂ ನ ಯಜ್ಞಮಿವ ನೃಮ್ಣಂ ಧನಂ ಸ್ಥವಿರಂ ಅತಿಶಯೇನ ಪ್ರವೃದ್ಧಂ ವಾಜಂ ಬಲಂ ಚ ಕೃಧಿ ಕುರು ॥

ವಿರಪ್ಶಿನ್ ಇನ್ದ್ರ ಮಹಾಐಶ್ವರ್ಯವಂತನಾದ ಇನ್ದ್ರ ಭಗವಂತನೇ – ವಿರಪ್ಶೀ ಮಹನ್ನಾಮ ನಿಘಂ ೩–೩ । ಸ್ತುತಿಸುವವರಿಗೆ ಸ್ಪಷ್ಟವಾದ ಖಚಿತವಾದ ಆಶೀರ್ವಾದ ಅನುಗ್ರಹಿಸುವವನೇ ತತ್ ಸಹಃ ಆ ಪ್ರಸಿದ್ಧ ಶತ್ರುಗಳನ್ನು ಸದೆಬಡಿಯುವಂತಹ ಬಾಹ್ಯ ಬಲವನ್ನೂ ಓಜಃ ಸಾಮರ್ಥ್ಯವೆನಿಸುವ ಆತ್ಮ ಬಲವನ್ನೂ ನಃ ನಮಗೆ ದದ್ಧಿ ಅನುಗ್ರಹಿಸು ಏಕೆಂದರೆ ನೀನು ಅಸ್ಯ ಮಹತಃ ಈ ಮಹಾಶಕ್ತಿಯ ಬಲದ ಈಶೇ ಒಡೆಯನಾಗಿದ್ದೀಯಲ್ಲವೆ ಆದುದರಿಂಧಲೇ ನಃ ನಮ್ಮ ಕ್ರತುಂ ನ ಯಜ್ಞಸದೃಶವಾದ

ಪ್ರಜ್ಞಾಸದೃಶವಾದ – ಕ್ರತುಃ ಪ್ರಜ್ಞಾನಾಮ ನಿಘಂ. ೩–೯ । ಕರ್ಮಾನುಸಾರ **ಸ್ಥವಿರಂ** ಸ್ಥಿರವಾದ ಹೆಚ್ಚಿನ ಪ್ರಮಾಣದ **ನೃಮ್ಣಂ** ಧನವನ್ನು – ನೃಮ್ಣಂ ಧನನಾಮ ನಿಘಂ. ೨–೧೦ । **ವಾಜಂ** ಬಲವನ್ನೂ ಧಾನ್ಯಾದಿ ಅನ್ನಸಮೃದ್ಧಿಯನ್ನೂ ಅನ್ನ ಸಂಕೇತವಾದ ಭೋಗ ಭಾಗ್ಯವನ್ನೂ – ಅಮೃತೋಽನ್ನಂ ವಾಜಃ ಜೈ ೨–೧೯೩ । **ನಃ** ನಮ್ಮ **ವೃತ್ರೇಷು ಉಪದ್ರವೇಷು ಸತ್ಸು** ಕಾಮಕ್ರೋಧಾದಿ ದೋಷಗಳ ನಿಮಿತ್ತ – ಪಾಪ್ಮಾ ವೈ ವೃತ್ರಃ ಶ.ಬ್ರಾ ೧೧–೧–೫೭ । ನಮ್ಮನ್ನು ಬಾಧಿಸುವ **ಶತ್ರೂನ್** ಶತ್ರುಗಳನ್ನು **ಸುಹನಾ ಕೃಧಿ** ಸುಲಭವಾಗಿ ಸದೆ ಬಡಿಯುವ ಬಲವನ್ನೂ ಸಾಮರ್ಥ್ಯವನ್ನೂ ಅನುಗ್ರಹಿಸು.

ಪರಮೈಶ್ವರ್ಯಶಾಲಿಯಾದ ಇನ್ದ್ರಭಗವಂತನೇ ಮಹಾಬಲಶಕ್ತಿ ಸಾಮರ್ಥ್ಯಗಳ ಒಡೆಯನಾದ ನೀನು ಯಜ್ಞಫಲವಾದ ಸ್ಥಿರವಾದ ಧನವನ್ನೂ ಬಲವನ್ನೂ ಅನ್ನಸಮೃದ್ಧಿಯನ್ನೂ ಭೋಗಭಾಗ್ಯಗಳನ್ನೂ ದಯಪಾಲಿಸು. ನಮಗೆ ಉಪಟಳ ಕೊಡುತ್ತಿರುವ ಕಾಮಕ್ರೋಧಾದಿ ಅರಿ ಷಡ್ವರ್ಗವನ್ನೂ ಶತ್ರು ಸಮೂಹವನ್ನೂ ಸುಲಭವಾಗಿ ಸದೆಬಡೆಯುವ ಶಕ್ತಿ ಸಾಮರ್ಥ್ಯಗಳನ್ನು ಅನುಗ್ರಹಿಸು.

*ಮಹೇಂದ್ರ ! ಸಂಪತ್ಕರ ! ಶಕ್ತಿಯುಕ್ತ !*
*ನಮ್ಗೀ ಸಮಕ್ಕೊಪ್ಪುವ ಭಾಗ್ಯಮಂ ನೀಂ ।*
*ನೀಡಯ್; ಬಲಂಗೂಡಿಸುತೆಮ್ಮ ವೈರಿ–*
*–ವ್ರಾತಂಗಳಂ ಘಾತಿಪ ಯುಕ್ತಿ ನೀಡಯ್ ॥*

॥ ಗವಾಂವ್ರತಮ್ ॥ ಕಶ್ಯಪಸ್ತ್ರಿಷ್ಟುಬಿನ್ದ್ರಃ ॥ ಗಾವಸ್ತ್ರಿಷ್ಟುಪ್‌ಗಾವಃ ವಾ ॥

೨೦ ೦ ೦ ೧೦ ೦
**೧೪೫.೧. ಹಾಉಹಾಉಹಾಉ । ತೇಮನ್ವತಪ್ರಥಮನ್ನಾಮಗೋ । ನಾಮ್ । ೩ ॥ ಹಾಉಹಾಉಹಾಉ । ತ್ರಿಸ್ಸಪ್ತಪರಮನ್ನಾಮಜಾ । ನಾನ್ । ೩ ॥ ಹಾಉಹಾಉಹಾಉ । ತಾಜಾನತೀರಭ್ಯನೂಷತಾ । ಕ್ಷಾಃ । ೩ ॥ ಹಾಉಹಾಉಹಾಉ । ಆವಿರ್ಭುವನ್ನರುಣೀರ್ಯಶ ಸಾಗಾ । ವಾಃ । ೩ । ಹಾಉಹಾಉಹಾಉ । ವಾ ॥ ಏ । ದುಧಾಃ । ೨–೨ । ಏ । ದುಧಾಽ೨೩೪೫ಃ ॥**

*ದೀ – ೨೭ । ಪ – ೨೮ । ಮಾ – ೩೦ । ಜೌ ॥ ೧೮.೨೪೬ ॥*

ಈ ೨೪೬ನೆಯ ಗಾನ ತೇಮನ್ವತ ಪ್ರಥಮ ೬೦೬ ಋಕ್ ಮೇಲೆ ಅಧಿಷ್ಠಿತವಾಗಿದೆ.

ಸ್ತೋಭ ಭಾಷ್ಯ – ತೇದುಘಾದೋಗ್ಧವ್ಯಃ । ಯ ಇನ್ದ್ರಂಸ್ತುವನ್ತಿ ತೇಷಾಂ ದುಘಾದೋಗ್ಧವ್ಯಃ ಗಾವಃ ಸಂಪದ್ಯನ್ತೇ ಇನ್ದ್ರಪ್ರಸಾದಾತ್ ॥ ೨೪೬ ॥

ಗೋವುಗಳ ಶ್ರೇಷ್ಠತೆಯನ್ನು ಮಾನ್ಯ ಮಾಡಿದವರು ಇನ್ದ್ರನನ್ನು ಸ್ತುತಿಸಿ ಗೌರವಿಸಿದಂತೆಯೇ ಆಗಿ ಇನ್ದ್ರನ ಅನುಗ್ರಹದಿಂದ ಹಾಲು ಹಿಂಡುವ ಗೋವುಗಳ ಸಮೃದ್ಧಿಯಿಂದ ಕೂಡಿದವರಾಗುತ್ತಾರೆ ॥ ಸಾ ೨೪೬ ॥

## ಋಕ್ – ೬೨೬

॥ ವಾಮದೇವೋ ಗೌತಮಃ ತ್ರಿಷ್ಟುಪ್ ಗಾವಃ ॥

೩ ೧ ೨ ೩ ೧ ೨ ೩ ೨ ೩ ೧ ೨ ೩ ೨ ೩ ೧ ೨
**ಸಹರ್ಷಭಾಃ ಸಹವತ್ಸಾಃ ಉದೇತ ವಿಶ್ವಾ ರೂಪಾಣಿ ಬಿಭ್ರತೀ**
೩ ೨ ೩ ೨ ೩ ೧ ೨ ೩ ೨ ೩ ೧
**ರ್ದ್ವ್ಯೂಧ್ನೀಃ ॥ ಉರುಃ ಪೃಥುರಯಂ ವೋ ಅಸ್ತು ಲೋಕ ಇಮಾ ಆ**
೨೦ ೩ ೨ ೩ ೧ ೨
**ಪಃ ಸುಪ್ರಪಾಣಾ ಇಹ ಸ್ತ** ॥ ೧೨-೬೨೬ ॥

ಸ್ವ-೧೮ । ಉ-೬ । ಧಾ-೯೯ । ಟೋ । ದ-೪ ॥

೩ ೧ ೨ ೩ ೨ ೩ ೧ ೨ ೩ ೨ ೩ ೧ ೨ ೩ ೧
**ಸಹರ್ಷಭಾಃ-ಸಹ-ಋಷಭಾಃ-ಸಹವತ್ಸಾಃ-ಸಹ-ವತ್ಸಾಃ-ಉದೇತ-ಉತ್-ಏ**
೨೦ ೧೨೦ ೩ ೧ ೨ ೧೨೦ ೩ ೨ ೩ ೨
**ತ । ವಿಶ್ವಾ-ರೂಪಾಣಿ-ಬಿಭ್ರತೀಃ-ದ್ವ್ಯೂಧ್ನೀಃ-ದ್ವಿ-ಊಧ್ನೀಃ ॥ ಉರುಃ-ಪೃಥುಃ**
೩ ೨ ೩ ೨ ೩ ೨ ೧೨೦ ೩ ೨ ೩
**-ಅಯಮ್-ವಃ-ಅಸ್ತು-ಲೋಕಃ ॥ ಇಮಾಃ-ಆಪಃ-ಸುಪ್ರಪಾಣಾಃ-ಸು-ಪ್ರಪಾ**
೨ ೩ ೨ ೩
**ಣಾಃ-ಇಹ-ಸ್ತ** ॥ ೧೨-೬೨೬ ॥ ಆ-೬೭ । ಅ-೨೭ । ಪ-೨೪೬ । ಘೂ । ದ-೪ ॥

॥ ಚತುರ್ಥೀದಶತಿಃ ॥ ೪ ॥

॥ ಚತುರ್ಥಃ ಖಣ್ಡಃ ॥ ೪ ॥

**೧೪೬.೧. ಹಾಉಹಾಉಹಾಉವಾ । ಸಹರ್ಷಭಾಸ್ಸಹವತ್ಸಾಉದೇತ ॥ ಹಾಉಹಾಉಹಾಉವಾ । ವಿಶ್ವಾರೂಪಾಣಿಬಿಭ್ರತೀದ್ರ್ವ್ಯೂಧ್ನೀಃ ॥ ಹಾಉಹಾಉಹಾಉವಾ । ಉರುಃಪೃಥುರಯಂವೋಽಅಸ್ತುಲೋಽಕಃ ॥ ಹಾಉಹಾಉಹಾಉವಾ । ಇಮಾಆಪಃಸುಪ್ರಪಾಣಾಇಹಸ್ತ । ಹಾಉಹಾಉಹಾಉವಾ ॥ ಅಶ್ವಮಿಷ್ಟ ಯೇಽऽಇಹಸ್ ॥**

*ದೀ - ೧೫ । ಪ - ೧೦ । ಮಾ - ೨೨ । ಮಾ ॥ ೧೯.೨೪೭ ॥*

ಸ್ತೋಭ ಭಾಷ್ಯ - ಸಹ ಋಷಭಾಃ ಸಹವತ್ಸಾಃ ಉದೇತ- ಆಗಚ್ಛತ ಗಾವಃ ದ್ರ್ವ್ಯೂಧ್ನೀಃ ದ್ವಿರೂಪಂ ಊಧಃ ಯಾಸಾಂ ತಾಃ । ಏಕಸ್ಮಿನ್ ಉಧಸಿ ಸುಕೃತಿನಃ ಅಮೃತರೂಪಂ ಪಯಃ ಅಪರಸ್ಮಿನ್ ವಿಷರೂಪಂ ಕ್ಷೀರಂ ವಿಭ್ರತೀಃ । ಅತ ಏವ ವಿಶ್ವಾರೂಪಾಣಿ ಪ್ರಾಣಿಕರ್ಮಾನುಸಾರೇಣ ನಾನಾಪ್ರಕಾರೇಣ ಅನನ್ತರೂಪಾಣಿ ಬಿಭೃತ್ಯಃ ಇತ್ಯುಚ್ಯತೇ । ಅತಃ ಕಾಲದೈರ್ಘ್ಯಾದುರುಃ ದೇಶವಿಭುತ್ವಾತ್ ಪೃಥುಃ ಅಯಂ ವಃ ಯುಷ್ಮಾಕಂ ಅಸ್ತು ಲೋಕಃ ಇಮಾಃ ಆಪಃ ಸುಪ್ರಪಾಣಾಃ ತಾಃ ಆಹುತಯಃ ಆಪ್ಯಾಯಿಕಾ ಇಹಸ್ತ ಅನುಕೂಲಾ ಭವತೇತ್ಯರ್ಥಃ । ಇಷ್ಟಯೇ ಇಷ್ಟ ಪ್ರಾಪ್ತಯೇ ಅಶ್ವಂ ವ್ಯಾಪಕರೂಪಂ ಕುರುತೇತಿ । ಸಾ ೨೪೭ ॥

ಹಸುಗಳು ಕರುಗಳೊಂದಿಗೂ ಗೂಳಿಗಳೊಂದಿಗೂ ನಮ್ಮಲ್ಲಿ ಬಂದು ಸೇರಲಿ. ಕೆಲವು ಪ್ರಾಣಿಗಳಲ್ಲಿ ಎರಡು ಕೆಚ್ಚಲುಗಳಿದ್ದು ಒಂದರಲ್ಲಿ ಅಮೃತಸ್ವರೂಪವಾದ ಹಾಲನ್ನು ತುಂಬಿಕೊಂಡು ಕರೆಯುತ್ತದೆ. ಇನ್ನೊಂದರಲ್ಲಿ ವಿಷರೂಪವಾದ ಹಾಲನ್ನು ತುಂಬಿ ಕೊಂಡು ವಿಷರೂಪವಾದಹಾಲನ್ನೇ ಕರೆಯುತ್ತವೆ. ಹೀಗೆ ಪ್ರಪಂಚದಲ್ಲಿ ಅನೇಕವಾದ ಬಗೆಬಗೆಯ ರೂಪಗಳನ್ನು ಕರ್ಮಾನುಸಾರ ಧರಿಸಿರುವ ಅನನ್ತಪ್ರಾಣಿಗಳಿವೆ. ಆದುದರಿಂದ ಕಾಲವು ದೀರ್ಘವಾಗಿದ್ದು ಅಗಾಧವಾದ ವಿಶಾಲವಾದ ವೈಭವಯುಕ್ತವಾದ ಈ ಲೋಕವೂ ನಾವೂ ನಿಮ್ಮವರಾಗಿದ್ದು ಈ ಆಹುತಿರೂಪವಾದ ಪ್ರಾಣದಾಯಕವಾದ ನೀರು ನಮ್ಮ ಕಾಮನಾ ಪೂರ್ತಿ ಮಾಡಲನುಕೂಲವಾಗುವಂತೆ ವ್ಯಾಪಕರೂಪದಲ್ಲಿರಲಿ । ಸಾ ೨೪೭ ॥

ಸಾಯಣ ಬಾಷ್ಯ - ಹೇ ಸಹರ್ಷಭಾಃ ವೃಷಭೈಃ ಸಹಿತಾಃ ಸಹವತ್ಸಾಃ । ವತ್ಸೈಃ ಸಹಿತಾಃ ಗಾವಃ । ದ್ರ್ವ್ಯೂಧ್ನೀಃ ಸಾಯಂಪ್ರಾತಃಕಾಲೇ ದ್ವಿವಿಧಾನ್ಯೂಧಾಂಸಿ

ಯಾಸಾಂ ತಾ ದ್ವ್ಯೂಧ್ನೀಃ । ದ್ವ್ಯೂಧ್ನ್ಯಃ । ವಿಶ್ವಾ ಸರ್ವಾಣಿ ನಾನಾರೂಪಾಣಿ ಭಿಭ್ರತೀಃ ಬಿಭ್ರತ್ಯಃ ಯೂಯಮ್ ಉದೇತ । ಉದ್ಗಚ್ಛತ । ಸಮೃದ್ಧಾಃ ಸತ್ಯಃ ಆಗಚ್ಛತ । ಕಿಂ ಚ । ಉರುಃ ಬಹುಃ ಪೃಥುಃ ವಿಸ್ತೀರ್ಣಃ । ಉರುಃ – ಪೃಥುರಿತಿ ಶಬ್ದಾಭ್ಯಾಮ್ ಆಯಾಮ ವಿಸ್ತಾರೌ ಉಚ್ಯೇತೇ । ಅಯಂಲೋಕಃ ವಃ ಯುಷ್ಮಾಕಮ್ ಅಸ್ತು ಭವತು। ಇಮಾ ಆಪಃ ಇಹ ಲೋಕೇ ಭೂತಲೇ ಅಸ್ಮಿನ್ಸ್ಥಾನೇ । ಸುಪ್ರಪಾಣಾಃ ಸುಖೇನ ಪ್ರಕರ್ಷೇಣ ಪಾತುಂ ಯೋಗ್ಯಾಃ ಸನ್ತು । ತಸ್ಮಾದಿಹ ಬಹ್ವೀಭೂತಾಃ ಸ್ತ ಭವತ । ಉಪವಿಶತೇತಿ ಪೂರ್ವೇಣ ಸಂಬನ್ಧಃ ॥

**ಸಹರ್ಷಭಾಃ** ಗೂಳಿಗಳ ಜೊತೆಯಲ್ಲಿರುವ ಋಷಭರೂಪೀ ಆತ್ಮದೊಂದಿಗಿರುವ ಸ್ತುತಿವಾಕ್ಯಗಳೇ – ಇನ್ದ್ರಸ್ಯ ರೂಪಮೃಷಭೋ ಬಲಾಯ ಮೈ ೩-೧೧-೯ । **ಸಹವತ್ಸಾಃ** ಕರುಗಳೊಂದಿಗಿರುವ ಮನರೂಪೀ ಮಗುವಿನೊಂದಿಗಿರುವ – ಮನ ಏವ ವತ್ಸಃ ಶತ. ೧೧-೩-೧೧ । **ದ್ವ್ಯೂಧ್ನೀಃ** ಸಾಯಂ ಪ್ರಾತಃಕಾಲಗಳಲ್ಲಿ ಹಾಲನ್ನು ನೀಡುವ ಐಹಿಕಸುಖ ಪಾರಲೌಕಿಕಸುಖ ಮೋಕ್ಷವನ್ನು ನೀಡುವ **ವಿಶ್ವಾಃ** ಸಮಸ್ತವಾದ **ರೂಪಾಣಿ** ಸುಂದರವಾದ ಮನೋಹರವಾದ ರೂಪಗಳನ್ನು **ಬಿಭ್ರತೀಃ** ಧರಿಸಿ ವಿರಾಜಿಸುವ ಗೋವುಗಳು **ಉದೇತ** ನಮ್ಮಲ್ಲಿಗೆ ಬಂದು ಸೇರಲಿ. **ಅಯಂ** ಈ **ಉರುಃ ಪೃಥುಃ ಲೋಕಃ** ಬಹು ವಿಸ್ತಾರವಾದ ವಿಶಾಲವಾದ ಪ್ರದೇಶವು ಲೋಕವು **ವಃ ಅಸ್ತು** ನಿಮ್ಮದಾಗಿರಲಿ **ಇಮಾಃ ಆಪಃ** ಈ ಪರಿಶುದ್ಧವಾದ ಸಮೃದ್ಧವಾದ ನೀರು ಜಲರಾಶಿಯು **ಸುಪ್ರಪಾಣಾಃ ಇಹ ಸ್ತ** ಸುಖಪೂರ್ವಕವಾಗಿ ಕುಡಿಯಲು ಯೋಗ್ಯವಾದ ಸಮೃದ್ಧಿಯಾದ ನೀರು ಯಾವಾಗಲೂ ಇಲ್ಲಿ ಸಿಗುತ್ತಿರಲಿ । ಋ. ೬೨೬ ॥

ಸಂಜೆ ಮತ್ತು ಬೆಳಿಗ್ಗೆ ಎರಡೂಹೊತ್ತು ಸಮೃದ್ಧಿಯಾಗಿ ಹಾಲು ಕರೆಯುವ ತಮ್ಮ ಕರುಗಳೊಂದಿಗೂ ಗೂಳಿಗಳೊಂದಿಗೂ ಇರುವ ಸುಂದರವಾದ ಮನೋಹರ ವಾದ ಅನೇಕಾನೇಕರೂಪಗಳನ್ನು ತಳೆದಿರುವ ದಿವ್ಯವಾದ ಗೋವುಗಳು ನಮ್ಮಲ್ಲಿ ಬಂದು ಸೇರಲಿ. ಈ ವಿಸ್ತಾರವಾದ ಹುಲ್ಲುಗಾವಲು ಗೋವುಗಳಿಗೆ ಮೇಯಲನುಕೂಲವಾಗು ವಂತಿರಲಿ. ಈ ಪರಿಶುದ್ಧವಾದ ಕುಡಿಯುವ ನೀರು ಸಮೃದ್ಧಿಯಾಗಿ ಯಾವಾಗಲೂ ಇಲ್ಲಿ ಸಿಗುತ್ತಿರಲಿ । ಋ. ೬೨೬ ॥

*ಕರುಗಳಂ ಗೂಳಿಗಳನೊಡವರಿದು ಬನ್ನಿಮಿತ್ತಲ್*
*ಆವುಗಳೆ ! ಬಗೆಬಗೆಯ ರಂಗಿನಿಂ ಕಂಗೊಳಿಸುತುಂ ।*
*ನಮ್ಮ ಬಳಿ ಬನ್ನಿ ಬನ್ನಿಮ್ ! ನಿಮಗೆ ಲೋಕವಿದುವೇ*
*ವಾಸಯೋಗ್ಯಂ, ನೀರುನೆಳಲುಗಳಿಗಿಲ್ಲ ಕೊರತೆ ॥*

ಸ್ತೋಭ ಪದಪಾಠಃ ದುಘಾಃ(೧ ೨೦)–ವಾಕ್–ಹ(೩ ೨)–ಪ್ರಜಾ(೩ ೨)–ಪ್ರ–ಜಾ(೩ ೨)–ತೋಕಮ್–ಅಜೀ(೩)–ಜನೇ–

೧ ೨೦ ೩ ೨ ೩ ೨ ೩ ೨ ೩ ೩
ಯ ಶ ಃ–ಅಕ್ರಾನ್–ಭೂತಮ್–ಅತತನತ್–ಪ್ರಜಾಃ–ಪ್ರ–ಜಾಃ–ಉ–ಸಮ್–ಅಚೂಕುಪತ್

೧ ೨ ೧೨೦
–ಪಶುಭ್ಯಃ–ಇ ತಿ ॥

॥ ಕಶ್ಯಪ ಪುಚ್ಛಂ ದಶಮಮ್ । ಕಶ್ಯಪಸ್ತ್ರಿಷ್ಟುಬಿನ್ದ್ರಃ । ಅಗ್ನಿರ್ವಾ ॥

೨೦ ೦ ೦ ೧ ೨ ೧೦ ೭೦
೧೪೭.೧. ಹಾಉಹಾಉಹಾಉ । ವಾಗ್ಘಹಹಹಹ । ೩ । ಐಹೀೕಽ

೧೦ ೨ ೧ ೨ ೦ ೦
೨ । ೩ । ಐಹಿಹಾಉವಾಕ್ । ೩ । ಹಾಹಾಉ । ೩ । ಹಾಉಹಾ

೦ ೧೦ ೦ ೨೦ ೦ ೧ ೩ ೧ ೧ ೧
ಉಹಾಉವಾ । ಪ್ರಜಾತೋೕಕಮಜೀೕಜನೇೕಹಸ್ । ಇಹಾಽ೨೩೪೫ ।

೨೦ ೦ ೦ ೧ ೨ ೧೦ ೭೦
ಹಾಉಹಾಉಹಾಉ । ವಾಗ್ಘಹಹಹಹ । ೩ । ಐಹೀೕಽ೨ । ೩ ।

೧೦ ೨ ೧ ೨ ೧ ೨
ಐಹಿಹಾಉವಾಕ್ । ೩ । ಹಾಹಾಉ । ೩ । ಆಯಾಉ । ೩ । ಅ

೧ ೨ ೨ —೧ ೨ ೨
ಗ್ನಿರಸ್ಮಿಜನ್ಮನಾಔಽ೩ಹೋೕ । ಹಾಽ೨ಇಯಾ । ಔಽ೩ಹೋೕ । ಹಾ

—೧ ೨ ೨ ೨೦ ೦ ೦ ೧ ೨
ಽ೨ಇಯಾ । ಔಽ೩ಹೋೕಽ೩ ॥ ಹಾಉಹಾಉಹಾಉ । ವಾಗ್ಘಹ

೧೦ ೭೦ ೧೦ ೨ ೧
ಹಹಹ । ೩ । ಐಹೀೕಽ೨ । ೩ । ಐಹಿಹಾಉವಾಕ್ । ೩ । ಹಾ

೨ ೦ ೦ ೦ ೧ ೦
ಹಾಉ । ೩ । ಹಾಉಹಾಉಹಾಉವಾ । ಇಹಪ್ರಜಾಮಿಹರಯಿ

೦ ೨೦ ೧ ೩ ೧ ೧ ೧ ೨೦ ೦ ೦
ಂರರಾಣೋೕಹಸ್ । ಇಹಾಽ೨೩೪೫ । ಹಾಉಹಾಉಹಾಉ ।

೧ ೨ ೧೦ ೭೦ ೧೦ ೨
ವಾಗ್ಘಹಹಹಹ । ೩ । ಐಹೀೕಽ೨ । ೩ । ಐಹಿಹಾಉವಾಕ್ । ೩ ।

೧ ೨ ೧ ೨೦ ೧ ೦ ೨ ೨
ಹಾಹಾಉ । ೩ । ಆಯಾಉ । ೩ । ಜಾತವೇದಾಔಽ೩ಹೋೕ ।

—೧ ೨ ೨ —೧ ೨ ೨
ಹಾಽ೨ಇಯಾ । ಔಽ೩ಹೋೕ । ಹಾಽ೨ಇಯಾ । ಔಽ೩ಹೋೕಽ೩ ।

ಹಾಉಹಾಉಹಾಉ । ವಾಗ್ಘಹಹಹಹ । ೩ । ಐಹೀೕಽ೨ । ೩ ।
ಐಹಿಹಾಉವಾಕ್ । ೩ । ಹಾಹಾಉ । ೩ । ಹಾಉಹಾಉಹಾ
ಉವಾ । ರಾಯಸ್ಪೋಷಾಯಸುಕೃತಾಯಭೂಯಸೇಹಸ್ । ಇಹಾಽ
೨೩೪೫ । ಹಾಉಹಾಉಹಾಉ । ವಾಗ್ಘಹಹಹಹ । ೩ । ಐಹೀೕಽ
೨ । ೩ । ಐಹಿಹಾಉವಾಕ್ । ೩ । ಹಾಹಾಉ । ೩ । ಆಯಾಉ ।
೩ । ಘೃತಮ್ಮೇಚಕ್ಷುರಮೃತಂಮಆಸಾನೌಽ೩ಹೋೕ । ಹಾಽ೨ಇ
ಯಾ । ಔಽ೩ಹೋೕ । ಹಾಽ೨ಇಯಾ । ಔಽ೩ಹೋೕಽ೩ । ಹಾಉ
ಹಾಉಹಾಉ । ವಾಗ್ಘಹಹಹಹ । ೩ । ಐಹೀೕಽ೨ । ೩ । ಐಹಿ
ಹಾಉವಾಕ್ । ೩ । ಹಾಹಾಉ । ೩ । ಹಾಉಹಾಉಹಾಉವಾ ।
ಆಗನ್ವಾಮಮಿದಂಬೃಹದ್ಧಸ್ । ಇಹಾಽ೨೩೪೫ । ಹಾಉಹಾಉ
ಹಾಉ । ವಾಗ್ಘಹಹಹಹ । ೩ । ಐಹೀೕಽ೨ । ೩ । ಐಹಿಹಾ
ಉವಾಕ್ । ೩ । ಹಾಹಾಉ । ೩ । ಆಯಾಉ । ೩ । ತ್ರಿಧಾತುರ
ಕೋೕರಜಸೋೕವಿಮಾನಾಔಽ೩ಹೋೕ । ಹಾಽ೨ಇಯಾ । ಔಽ೩
ಹೋೕ । ಹಾಽ೨ಇಯಾ । ಔಽ೩ಹೋೕಽ೩ ॥ ಹಾಉಹಾಉಹಾಉ ।
ವಾಗ್ಘಹಹಹಹ । ೩ । ಐಹೀೕಽ೨ । ೩ । ಐಹಿಹಾಉವಾಕ್ । ೩ ।
ಹಾಹಾಉ । ೩ । ಹಾಉಹಾಉಹಾಉವಾ । ಇದಂವಾಮಮಿದಂ

ಬೃಹದ್ಧಸ್ । ಇಹಾಽ೨ಇಳಿಃ । ಹಾಉಹಾಉಹಾಉ । ವಾಗ್ಘಹ

ಹಹಹ । ಇ । ಐಹೀೕಽ೨ । ಇ । ಐಹಿಹಾಉವಾಕ್ । ಇ । ಹಾ

ಹಾಉ । ಇ । ಆಯಾಉ । ಇ । ಅಜಸ್ರಂಜ್ಯೋತಾಇರೌಽಇಹೋೕ ।

ಹಾಽ೨ಇಯಾ । ಔಽಇಹೋೕ । ಹಾಽ೨ಇಯಾ । ಔಽಇಹೋೕಽಇ ॥

ಹಾಉಹಾಉಹಾಉ । ವಾಗ್ಘಹಹಹ । ಇ । ಐಹೀೕಽ೨ । ಇ ।

ಐಹಿಹಾಉವಾಕ್ । ಇ । ಹಾಹಾಉ । ಇ । ಹಾಉಹಾಉಹಾ

ಉವಾ । ಚರಾಚರಾಯಬೃಹತಇದಂವಾಮಮಿದಂಬೃಹದ್ದಸ್ ।

ಇಹಾಽ೨ಇಳಿಃ । ಹಾಉಹಾಉಹಾಉ । ವಾಗ್ಘಹಹಹ । ಇ ।

ಐಹೀೕಽ೨ । ಇ । ಐಹಿಹಾಉವಾಕ್ । ಇ । ಹಾಹಾಉ । ಇ । ಆ

ಯಾಉ । ಇ । ಹವಿರಸ್ಮಿನ್ಸರ್ವಾಮೌಽಇಹೋೕ । ಹಾಽ೨ಇಯಾ ।

ಔಽಇಹೋೕ । ಹಾಽ೨ಇಯಾ । ಔಽಇಹೋೕಽಇ । ಹಾಉಹಾಉ

ಹಾಉ । ವಾಗ್ಘಹಹಹ । ಇ । ಐಹೀೕಽ೨ । ಇ । ಐಹಿಹಾ

ಉವಾಕ್ । ಇ । ಹಾಹಾಉ । ಹಾಉಹಾಉಹಾಉವಾ ॥ ಚರಾ

ಚರಾಯಬೃಹತಇದಂವಾಮಮಿದಂಬೃಹದ್ಧಸ್ । ಇಹಾಽ೨ಇಳಿಃ ।

ಹಾಉಹಾಉಹಾಉ । ವಾಗ್ಘಹಹಹ । ಇ । ಐಹೀೕಽ೨ । ಇ ।

ಐಹಿಹಾಉವಾಕ್ । ಇ । ಹಾಹಾಉ । ಆಯಾಉ । ಇ । ಹವಿ

೨ ೨ —೧ ೨ ೨
ರಸ್ಮಿನ್ಸರ್ವಾಮೌsಇಹೋ । ಹಾs೨ಇಯಾ । ಔsಇಹೋ । ಹಾ
—೧ ೨ ೨ ೨ರ ೦ ೦ ೧ ೨
s೨ಇಯಾ । ಔsಇಹೋsಇ । ಹಾಉಹಾಉಹಾಉ । ವಾಗ್ಘಹ
೧೦ ೫೦ ೧೦ ೨ ೧
ಹಹಹ । ಇ । ಐಹೀs೨ । ಇ । ಐಹಿಹಾಉವಾಕ್ । ಇ । ಹಾ
೨ ೨ರ ೧ ೦ ೨ರ ೦ ೧ ೨ ೧೦ ೨ರ
ಹಾಉ । ಏಯಶೋಕ್ರಾನ್ಭೂತಮತತನತ್ಪ್ರಜಾಉಸಮಚೂಕುಪತ್ಪ
೧ ೨ರ ೧ ೩ ೧೧೧
ಶುಭ್ಯೋಹಸ್ । ಇಹಾs೨ಇಳಸ ॥

ದೀ – ೧೯೧ । ಪ – ೨೩೮ । ಮಾ – ೨೨೧ । ಗ ॥ ೨೦.೨೪೮ ॥

ಈ ೨೪೮ನೆಯ ಗಾನವು ಅಗ್ನಿರಸ್ಮಿಜನ್ಮನಾ ೬೧೩ನೆಯ ಋಕ್ ಮೇಲೆ ಅಧಿಷ್ಠಿತವಾಗಿದೆ.

ಸ್ತೋಭ ಭಾಷ್ಯ – ಇನ್ದ್ರಏವಾಹ ಅಗ್ನಿಃ ಅಗ್ರಣೀಃ ಅಹಮಿತ್ಯಾದಿ ಪ್ರಜಾಂತೋಕಂ ಅಪತ್ಯಸ್ಥಾನೀಯಂ ಪ್ರಜಾಂ ಅಹಂ ಅಜೀಜನೇ ಜನಯಾಮಿ ಏತಚ್ಚ ಸತ್ಯಂ ಯತೋವಾಕ್ ಹ ಕಿಲ ಪರಮಾತ್ಮನೋ ನಿಶ್ವಾಸ ಸ್ಥಾನೀಯಾ ಶ್ರುತಿಲಕ್ಷಣಾ ಕಥಯತಿ । ಏಷ ಇನ್ದ್ರಃ ಯಶೋ ಅಕ್ರಾನ್ ಆಕ್ರಾಮತಿ । ಭೂತಂ ಚೇತನಾಚೇತನ ರೂಪಂ ಅತತನತ್ ವಿಸ್ತಾರಯತಿ । ಪಶುಭ್ಯಃ ಪಶ್ವಾದಿ ಧನವಿಷಯೇ ಪ್ರಜಾಉ ಸಂ ಅಚೂಕುಪತ್ ಆಕುಲೀಕರೋತಿ ಪಶ್ವಾದಿ ವಿಷಯಂ ವ್ಯಾಮೋಹಂ ಜನಯತಿ ಅವಿದುಷಾಂ ಸಂಸಾರಿಣಾಂ ಇತ್ಯರ್ಥಃ ॥ ಸಾ ೨೪೮ ॥

ಭಗವಂತನ ನಿಃಶ್ವಾಸರೂಪವಾದ ವೇದವಾಣಿಯನ್ನು ಕೀರ್ತಿಸುವವರಲ್ಲಿ ನಾನೇ ಎಲ್ಲರಿಗೂ ಪ್ರಥಮನೂ ಮುಂದಾಳೂ ಆದ ಅಗ್ನಿಯಾಗಿದ್ದೇನೆ. ಪುತ್ರ ಸ್ಥಾನೀಯರಾದ ಪ್ರಜೆಗಳನ್ನು ಸೃಷ್ಟಿಸಿದವನು ನಾನೇ ಎಂಬುದು ಸತ್ಯ. ಈ ಯಶಸ್ಸೆಲ್ಲವೂ ಇನ್ದ್ರನಿಗೇ ಸೇರಿದ್ದು ಭೂತಜಾತದ ಚೇತನಾಚೇತನದ ಸಂತತಿಯನ್ನು ವಿಸ್ತರಿ ಸುವವನೂ ಮುಂದುವರೆಸುವವನೂ ನಾನೇ. ಪಶುಆದಿ ಸಂಪತ್ತಿನ ಬಗೆಗೆ ವಿದ್ವಾಂಸರಲ್ಲದ ಸಂಸಾರಿಗಳಲ್ಲಿ ವ್ಯಾಮೋಹವನ್ನುಂಟುಮಾಡಿ ಪ್ರಜೆಗಳ ಮನಸ್ಸನ್ನು ಸಂಕುಚಿತ ಗೊಳಿಸುತ್ತೇನೆ ಎಂದು ಅಗ್ನಿ ಭಗವಂತನು ತಿಳಿಸುತ್ತಿದ್ದಾನೆ । ಸಾ ೨೪೮ ॥

॥ ಅನಡುದ್ವ್ರತೇ ದ್ವೇ । ನಿಹ್ನವಾಭಿ ನಿಹ್ನವೌ ದ್ವಾವನಡುದ್ವ್ರತೇ ವಾ ನಿಹ್ನವಮ್ । ಪ್ರಜಾಪತಿಸ್ತ್ರಿಷ್ಟುಬಿನ್ದ್ರಃ ॥

**೧. ಇತೀಽ೨ಇತಿ । ೩ । ಇತಿಮಾತ್ರಾಚರತಿವತ್ಸಕಾಽ೨ಇತಿ । ೨ ॥ ಇತಿಮಾತ್ರಾಚರತಿವತ್ಸಕಾಽ೨೩ಃ । ಆಽ೨ಇ । ತಾಽ೨೩ಳ । ಔ ಹೋᳶವಾ ॥ ಏ । ಇತಿ । ಏ । ಇತಿ । ಏ । ಇತೀಽ೨೩ಳ೫ ॥**

*ದೀ – ೧೧ । ಪ – ೧೫ । ಮಾ – ೭ । ಜೇ ॥ ೨೧.೨೪೯ ॥*

ಸ್ತೋಭ ಭಾಷ್ಯ – ಆರ್ದ್ರಭಾವೇನ ಇನ್ದ್ರಭಾವೇನ ಮಾತ್ರಾ ರಾತ್ರ್ಯಾ ಸಹ ಚರತಿ ವತ್ಸಕಃ ಆದಿತ್ಯಃ । ವಿರಾಜೋ ಭೋಕ್ತಾ ಸೂರ್ಯೋಽಗ್ನಿಶ್ಚ ವತ್ಸ ಇತ್ಯುಚ್ಯತೇ॥ ಸಾ ೨೪೯ ॥ ಸ್ವಯಂ ಅಹಂ ಐಶ್ವರ್ಯಾತ್ ಸ್ಕನ್ವೇ ತ್ರೈಲೋಕ್ಯಂ ವ್ಯಾಪ್ನೋಮಿ । ಇತಿ ಕಥಯತಿ ಭಗವಾನಿನ್ದ್ರಃ ॥ ಸಾ ೨೫೦ ॥

ಸೂರ್ಯನೂ ಅಗ್ನಿಯೂ ಶಿಶುಗಳೆಂದೂ ವಿರಾಟ್‌ಪುರುಷನು ಭೋಕ್ತೃವೆಂದೂ ತಿಳಿಸಿರುವಂತೆ ಆದಿತ್ಯನು ಶಿಶುವಿನಂತೆ ಆರ್ದ್ರಭಾವದಿಂದ ರಾತ್ರಿಯೊಂದಿಗೆ ಜೊತೆಗೂಡಿ ಸಂಚರಿಸುತ್ತಾನೆ । ಸಾ ೨೪೯ ॥ ನಾನು ಮಹದೈಶ್ವರ್ಯದಿಂದ ತ್ರಿಲೋಕಗಳನ್ನೂ ವ್ಯಾಪಿಸಿರುತ್ತೇನೆಂದು ಭಗವಂತನಾದ ಇನ್ದ್ರನು ದೃಢಪಡಿಸುತ್ತಿದ್ದಾನೆ । ಸಾ ೨೫೦ ॥

॥ ಅಥ ನಿಹ್ನವನಮೇತದನಡುದ್ವ್ರತಂ ವಾ ॥

**೨. ಸ್ವಯಂ ಸ್ಕನ್ವಾಇ । ಸ್ವಯಂ ಸ್ಕೋನ್ವಾಽ೨ಇ । ೨–೨ । ಸ್ವಯಂ ಸ್ಕನ್ವಾಇ । ಸ್ವಯಮ್ । ಸ್ಕೋಽ೨ । ನ್ವಾಽ೨೩ಳ । ಔಹೋᳶವಾ ॥ ಏ । ಸ್ಕನ್ವೇ । ೨–೨ । ಏ । ಸ್ಕನ್ವಾಽ೨೩ಳ೫ಇ ॥**

*ದೀ – ೭ । ಪ – ೧೫ । ಮಾ – ೭ । ಞೇ ॥ ೨೨.೨೫೦ ॥*

ದ್ವಾದಶ ಅಷ್ಟಮಃ ಖಣ್ಡಃ ॥ ೮ ॥
॥ ಇತಿ ಆರಣ್ಯಕಗಾನೇ । ಪಂಚಮಃ ಪ್ರಪಾಠಕಃ ॥

॥ ವ್ರತಪರ್ವಂಸಮಾಪ್ತಮ್ ॥ ಇತಿ ಪಂಚಮಂ ಗಾನಂ ಸಮಾಪ್ತಮ್ ॥

## ॥ ಅಥ ಶುಕ್ರಿಯ ಪರ್ವ ॥

॥ ಅಗ್ನೇರ್ವ್ರತಮ್ । ಅಗ್ನಿರ್ಗಾಯತ್ರ್ಯಗ್ನಿಃ ॥

೨೦ ೦ ೦ ೩೦ ೨೦ ೩೦ ೦ ೨ ೦
೧೪೮.೧. ಹಾಉಹಾಉಹಾಉ । ಭ್ರಾಜಾಓವಾ । ೩ । ಅಗ್ನಿರ್ಮೂ
೦ ೧ ೨ — ೦ ೧ ೨
ರ್ಧಾದಿಽ೩ವಾಃಕಾಽ೧ಕೂಽ೨ತ್ ॥ ಪತಿ೨ತಿಪೃಥೀವೀಽ೩ಯಾಆಽ೧
— ೦ ೦ ೦ ೧ ೨
ಯಾಽ೨ಮ್ ॥ ಅಪಾ೮ರೇತಾ೮ಸಿಽ೩ಜಾಇನ್ವಾಽ೧ತೀಽ೨೩ ॥
೨೦ ೦ ೦ ^ ೩೦ ೨೦ ೩೦ ೦ ೦ ೨ ೪
ಹಾಉಹಾಉಹಾಉ । ಭ್ರಾಜಾಓವಾ । ೨ । ಭ್ರಾಜಾಽ೩ಓಽ೫ವಾಽ
೨೦ ೧ ೨ ೧ ೨೦ ೧೦ ೩ ೧ ೧ ೧
೬೫೬ ॥ ಏ । ವಿಶ್ವಸ್ಯಜಗತೋ೯ಜ್ಯೋತೀಽ೨೩೪೫ಃ ॥

*ದೀ - ೩೬ / ಪ - ೧೩ / ಮಾ - ೧೭ / ಗೇ ॥ ೧.೨೫೧ ॥*

ಈ ೨೫೧ನೆಯ ಸಾಮಗಾನವು ಅಗ್ನಿರ್ಮೂರ್ಧಾದಿವಃ ೨೭ ಋಕ್ ಮೇಲೆ ಅಧಿಷ್ಠಿತವಾಗಿದೆ.

॥ ವಾಯೋರ್ವ್ರತಮ್ । ವಾಯೋರತ್ಯಷ್ಟಿಃ ಸೋಮಃ ॥

೨೦ ೧ ೨೦ — ೧೦ ೨
೧೪೯.೧. ಭ್ರಾಜಾ । ೨ । ಭ್ರಾಜಾಽ೩೧ಉ । ವಾಽ೨ । ಅಯಾರು
೧೦ ೨೦ ೦ ೧ ೨೦ ೧೦ ೦ ೨ ೧ ೨
ಚಾಹರಿಣ್ಯಾಪುನಾನಃ ॥ ವಿಶ್ವಾದ್ವೇಷಾಜ್ಸಿತರತಿಸಯುಗ್ವಭಿಃ ।
೧೦ ೨೦ ೧೨ ೧ ೨ ೧೦ ೦ ೨ ೧ ೨೦ ೦ ೦ ೧೦
ಸೂರೋ೯ನಸಯುಗ್ವಭಿಃ । ಧಾರಾಪೃಷ್ಠಸ್ಯರೋ೯ಚತೇ । ಪುನಾನೋ೯
೨ ೧೦ ೨೦ ೧ ೨೦ ೧೦ ೨ ೧೦ ೨ ೧೦ ೦
ಅರುಷೋ೯ಹರಿಃ ॥ ವಿಶ್ವಾಯದ್ರೂಪಾಪರಿಯಾಸ್ಯೃಕ್ವಭಿಃ ॥ ಸಪ್ತಾಸ್ಯೇ೯
೨ ೧ ೨ ೦ ೧ ೨೦ — ೦ ೧
ಭಿರೃಕ್ವಭಿಃ । ಭ್ರಾಜಾ । ೨ । ಭ್ರಾಜಾಽ೩೧ಉ । ವಾಽ೨ ॥ ಏ । ವಿ

೨೦ ೧೨೦ ೧೦ ೨ ೧ ^ ೩ ೫೦ ೦ ೧
ಶ್ವಸ್ಮೈಜಗತೇಜ್ಯೋತಿಃ । ಜ್ಯೋऽ೨ತಾऽ೨೩೪ಔಹೋವಾ ॥ ಇಟ್
೧ ೧ ೧
ಸ್ಥಿ ಇಡಾऽ೨೩೪೫ ॥

*ದೀ - ೩೪ / ಪ - ೧೯ / ಮಾ - ೧೨ / ಧಾ ॥ ೨.೨೫೨ ॥*

ಈ ೨೫೨ನೆಯ ಸಾಮಗಾನವು ಅಯಾರುಚಾಹರಿಣ್ಯಾ ೪೬೩ನೆಯ ಋಕ್ ಮೇಲೆ ಅಧಿಷ್ಠಿತವಾಗಿದೆ.

ಸ್ತೋಭ ಭಾಷ್ಯ - ಭ್ರಾಜ ಭ್ರಾಜತೇ । **ವಿಶ್ವಸ್ಯ** ಜಗತೋ **ಜ್ಯೋತಿಃ** ಅಗ್ನಿಃ । ಸಾ ೨೫೧ । **ವಿಶ್ವಸ್ಮೈ** ಜಗತೋಜ್ಯೋತಿಃ **ಸೋಮಸ್ಯ** ಆಪ್ಯಾಯಕತ್ವೇನ ಜ್ಯೋತಿಷ್ಟ್ವಂ । ಸಾ ೨೫೨ ॥ **ವಯಃ** ಅನ್ನಂ **ಪಯಃ** ಪಾನಂ **ಚಕ್ಷುಃ ಶ್ರೋತ್ರಂ ಆಯುಃ ತಪಃ ಕರ್ಮ ವರ್ಚಃ** ದೀಪ್ತಿಃ **ತೇಜಃ** ಪ್ರಾಗಲ್ಭ್ಯಂ **ಸ್ವಃ ಜ್ಯೋತಿಃ** ಇತ್ಯಾದಿ ಭಗವತೋ ವೈಶ್ವಾನರಸ್ಯ, ಪ್ರಸಾದಾದವಾಪ್ಯನ್ತೇ । **ಅಗ್ನಿಃ ಸಮುದ್ರಂ** ಅನ್ತರಿಕ್ಷ**ಮಾಕ್ಷಯತ್** ಹವಿರ್ವಹನದ್ವಾರೇಣ ಸ್ಥಾಪಯತಿ । **ಮೂರ್ಧಾ ದಿವಃ** ಆದಿತ್ಯಾತ್ಮನಾ **ಭವತ್** - ಭವತಿ ॥ ಸಾ ೨೫೩ ॥

ವಿಶ್ವವ್ಯಾಪಿಯಾದ ಜಗತ್ತಿನ ಜ್ಯೋತಿಯು ಅಗ್ನಿಯೇ ಆಗಿದೆ । ೨೫೧ । ಸೋಮ ಭಗವಂತನ ಆಪ್ಯಾಯಮಾನ ಸ್ವಭಾವದ ಕಾರಣ ಈ ಜ್ಯೋತಿಯು ಎಂಟು ಬಗೆಯದಾಗಿದೆ । ಸಾ ೨೫೨ ॥ ಭಗವಂತನಾದ ವೈಶ್ವಾನರನ ಅನುಗ್ರಹದಿಂದ ಅನ್ನ ಪಾನ ನೋಟ ಕೇಳುವಿಕೆ ಆಯುಸ್ಸು ತಪಸ್ಸು ಕರ್ಮ ವರ್ಚಸ್ಸು ಇವುಗಳಿಂದುಂಟಾಗುವ ಆತ್ಮವಿಶ್ವಾಸ ಪಾಂಡಿತ್ಯ ಉತ್ಸಾಹ ದಕ್ಷತೆ ಆದಿ ಪ್ರಾಗಲ್ಭ್ಯಗಳು ಆಪ್ಯಾಯಮಾನವಾದ ದಿವ್ಯಜ್ಯೋತಿಯ ಸ್ವರೂಪಗಳೇ ಆಗಿವೆ. ಅಗ್ನಿ ಭಗವಂತನು ತನ್ನ ಹವಿರ್ವಹನ ಕರ್ಮದಿಂದ ಸಮುದ್ರ ಸಂಕೇತವಾದ ಅಕ್ಷಯವಾದ ನೀರಿನ ಭಂಡಾರವನ್ನೇ ಅನ್ತರಿಕ್ಷದಲ್ಲಿ ಸ್ಥಾಪಿಸಿ ಆದಿತ್ಯಾತ್ಮನಾಗಿ ವಿಜೃಂಭಿಸುತ್ತಿದ್ದಾನೆ । ಸಾ ೨೫೩ ॥

೧೨೦ ೧೨೦ ೧೨೦ ೧ ೨೦ ೧ ೨೦ ೧೨೦ ೧೨೦
ಸ್ತೋಭ ಪದಪಾಠಃ-ವಯಃ-ಪಯಃ-ಚಕ್ಷುಃ-ಶ್ರೋತ್ರಮ್-ಆಯುಃ-ತಪಃ -ವರ್ಚಃ-
೩ ೨೦ ೩ ೨ ೩ ೨ ೩ ೨ ೩
ತೇಜಃ-ಅಗ್ನಿಃ-ಸಮುದ್ರಮ್-ಸಂ-ಉದ್ರಮ್-ಆ-ಕ್ಷಯತ್ ॥

॥ ಮಹಾವೈಶ್ವಾನರವ್ರತೇ ದ್ವೇ । ವೈಶ್ವಾನರೋಜಗತೀ ವೈಶ್ವಾನರಃ ॥

೨೦ ೦ ೦ ೩೦೨೦^ ೩೦ ೨೦ ೨
೧೫೦.೧. ಹಾಉಹಾಉಹಾಉ । ಓಹಾ । ೨ । ಓಹಾಇ । ವ

ಯೋ೯ಹೋ೯ಇ । ೩ । ಪಯೋ೯ಹೋ೯ಇ । ೩ । ಚಕ್ಷುಹೋರ್ಇ ।
೩ । ಶ್ರೋತ್ರ೮\ಹೋ೯ಇ । ೩ । ಆಯುಹೋರ್ಇ । ೩ । ತಪೋ೯
ಹೋ೯ಇ । ೩ । ವರ್ಚೋ೯ಹೋ೯ಇ । ೩ ।ತೇ೯ಜೋ೯ಹೋ೯ಇ । ೩ ।
ಸುವಹೋರ್ಇ । ೩ । ಜ್ಯೋ೯ತಿಹೋರ್ಇ । ೩ । ಪ್ರಕ್ಷಸ್ಯವೃಷ್ಣೋ೯
ಅರುಷಸ್ಯನೂಮಾಽ೨೩ಹಾಃ ॥ ಪ್ರನೋ೯ವಚೋ೯ವಿದಥಾಜಾತವೇ
ದಾಽ೨೩ಸಾಇ ॥ ವೈಶ್ವಾನರಾಯಮತಿರ್ನ್ನವ್ಯಸೇ೯ಶೂಽ೨೩ಚೇ೯ಃ ॥
ಸೋ೯ಮಇವಪವತೇ೯ಚಾರುರಗ್ನಾಽ೨೩ಯಾಽ೩ಇ । ಹಾಉಹಾಉ
ಹಾಉ । ಓಹಾ । ೨ । ಓಹಾಇ । ವಯೋ೯ಹೋ೯ಇ । ೩ । ಪ
ಯೋ೯ಹೋ೯ಇ । ೩ । ಚಕ್ಷುಹೋರ್ಇ । ೩ । ಶ್ರೋತ್ರ೮\ಹೋ೯ಇ ।
೩ । ಆಯುಹೋರ್ಇ । ೩ । ತಪೋ೯ಹೋ೯ಇ । ೩ । ವರ್ಚೋ೯
ಹೋ೯ಇ । ೩ । ತೇ೯ಜೋ೯ಹೋ೯ಇ । ೩ । ಸುವಹೋರ್ಇ । ೩ ।
ಜ್ಯೋ೯ತಿಹೋರ್ಇ । ೨ । ಜ್ಯೋ೯ತಿಹೋರ್ಽ೨ । ವಾಽ೨೩ಳಔ
ಹೋ೯ವಾ ॥ ಏ । ಅಗ್ನಿಸ್ಸಮುದ್ರಮಾಕ್ಷಯತ್ । ಏ । ಅಗ್ನಿರ್ಮೂ
ರ್ದ್ಧಾಭವದ್ದಿವಃ । ಏ । ಆಯುರ್ದ್ಧಾಅಸ್ಮಭ್ಯಂವರ್ಚೋ೯ಧಾದೇ೯ವೇ
ಭ್ಯಾಽ೨೩ಳಶಿಃ । ।*ದೀ -೧೦೦ । ಪ -೭೯ । ಮಾ - ೧೦೮ । ಭೈ ॥ ೩.೨೫೩ ॥*

ಈ ೨೫೩ನೆಯ ಸಾಮಗಾನವು ಪ್ರಕ್ಷಸ್ಯ ವೃಷ್ಣೋ ೬೦೯ನೆಯ ಋಕ್ ಮೇಲೆ ಅಧಿಷ್ಠಿತವಾಗಿದೆ.

ಸ್ತೋಭ ಪದಪಾಠಃ – ಇಹ–ಸ್ವಃ–ವೈಶ್ವಾನರಾಯ–ವೈಶ್ವ–ನರಾಯ–ಪ್ರದಿಶಃ–ಪ್ರ–ದಿಶಃ–
ಜ್ಯೋತಿಃ–ಬೃಹತ್–ಇನ್ದುಃ–ಇಡಾ–ಸತ್ಯಮ್–ದ್ಯೌಃ–ಭೂತಮ್–ಪೃಥಿವೀ–ಸಹಃ–ತೇಜಃ–
ಆಪಃ–ಉಷಾ–ದಿಶಃ–ಜ್ಯೋತಿಃ–ಘರ್ಮಃ–ಮರುದ್ಭಿಃ–ಭುವನೇಷು–ಚಕ್ರದತ್ ॥

॥ ಮಹಾವೈಶ್ವಾನರವ್ರತಮ್ । ವೈಶ್ವಾನರೋ ಬೃಹತೀ ವೈಶ್ವಾನರಃ ॥

೧೫೧.೧. ಓಽ೩೧ಮ್ । ೩ । ಆಯೂಃ । ೩ । ಜ್ಯೋತೀಃ । ೩ ।
ಜ್ಯೋತೋವಾ । ೩ । ಜ್ಯೋತೋವಾಹಾಇ । ೨ । ಜ್ಯೋತೋ
ವಾಽ೩ಹಾಉ । ವಾ । ಇಹಸ್ವರ್ವೈಶ್ವಾನರಾಯಪ್ರದಿಶೋಜ್ಯೋತಿ
ರ್ಬೃಹತ್ । ಇನ್ದುರಿಡಾಸತ್ಯಮ್ । ಸತ್ಯಮ್ । ೨ । ಸತ್ಯೋವಾ ।
೩ । ಸತ್ಯೋವಾಹಾಇ । ೨ । ಸತ್ಯೋವಾಽ೩ಹಾಉ । ವಾ । ಇ
ಹಸ್ವರ್ವೈಶ್ವಾನರಾಯಪ್ರದಿಶೋಜ್ಯೋತಿರ್ಬೃಹತ್ । ಕಾಯಮಾನೋ
ವನಾತುವಾಮ್ । ತುವಾಮ್ । ೨ । ತುವ್ರೋವಾ । ೩ । ತುವ್ರೋ
ವಾಹಾಇ । ೨ । ತುವ್ರೋವಾಽ೩ಹಾಉ । ವಾ । ಇಹಸ್ವರ್ವೈಶ್ವಾನ
ರಾಯಪ್ರದಿಶೋಜ್ಯೋತಿರ್ಬೃಹತ್ ॥ ದ್ಯೌರ್ಭೂತಂಪೃಥಿವೀ । ಪೃ
ಥಿವೀ । ೨ । ಪೃಥಿವ್ಯೋವಾ । ೩ । ಪೃಥಿವ್ಯೋವಾಹಾಇ । ೨ ।
ಪೃಥಿವ್ಯೋವಾಽ೩ಹಾಉ । ವಾ । ಇಹಸ್ವರ್ವೈಶ್ವಾನರಾಯಪ್ರದಿಶೋ
ಜ್ಯೋತಿರ್ಬೃಹತ್ । ಯನ್ಮಾತ್ರೂರಜಗನ್ನಪಾಃ । ಅಪಾಃ । ೨ । ಅ

೧೦ ೦ ೨೧೦ ೦ ೨ ೨ ೧೦ ನ ೨
ಪೋವಾ । ೩। ಅಪೋವಾಹಾಇ । ೨ । ಅಪೋವಾಽ೩ಹಾಉ ।

೧ ೨೦ ೦ ೧೦ ೨೧ ೨೦ ೧೦ ೨ ೧ ೨
ವಾ । ಇಹಸ್ವರ್ವೈಶ್ವಾನರಾಯಪ್ರದಿಶೋಜ್ಯೋತಿರ್ಬೃಹತ್ ॥ ಸಹ

೧೦ ೨೧೦೨ ೧೦೨ ೧೦ ೨೦ ೧೦ ೦ ೨೦ ೧೦ ೦
ಸ್ತೇಜಆಪಃ । ಆಪಃ । ಆಪಃ । ಆಪೋವಾ । ೩ । ಆಪೋವಾ

೨ ೦ ೧೦ ನ ೨ ೧ ೨ ೦ ೦ ೧೦
ಹಾಇ । ೨ । ಆಪೋವಾಽ೩ಹಾಉ । ವಾ । ಇಹಸ್ವರ್ವೈಶ್ವಾನರಾ

೨೧ ೨೦ ೧೦ ೨ ೧ ೨ ೦ ೦ ೦
ಯಪ್ರದಿಶೋಜ್ಯೋತಿರ್ಬೃಹತ್ । ನತತ್ತೇಅಗ್ನೇಪ್ರಮೃಷೇನಿವರ್ತ

೧೦ ೦ ೨ ೧೦ ೦ ೨
ನಾಮ್ । ತನಾಮ್ । ೨ । ತನೋವಾ । ೩ । ತನೋವಾಹಾಇ ।

೧೦ ನ ೨ ೧ ೨೦ ೦ ೧೦ ೨ ೧
೨ । ತನೋವಾಽ೩ಹಾಉ । ವಾ । ಇಹಸ್ವರ್ವೈಶ್ವಾನರಾಯಪ್ರದಿ

೨೦ ೧೦ ೨ ೧ ೦ ೦ ೦ ೦
ಶೋಜ್ಯೋತಿರ್ಬೃಹತ್ ॥ ಉಷಾದಿಶೋಜ್ಯೋತಿಃ । ಜ್ಯೋತಿಃ ।

೨೦ ೧೦ ೦ ೨೦ ೧೦ ೦ ೨ ೦
೨ । ಜ್ಯೋತೋವಾ । ೩ । ಜ್ಯೋತೋವಾಹಾಇ । ೨ । ಜ್ಯೋ

೧೦ ನ ೨ ೧ ೨೦ ೦ ೧೦ ೨೧ ೨೦ ೧೦
ತೋವಾಽ೩ಹಾಉ।ವಾ । ಇಹಸ್ವರ್ವೈಶ್ವಾನರಾಯಪ್ರದಿಶೋಜ್ಯೋ

೨ ೧ ೨ ೦ ೦ ೦
ತಿರ್ಬೃಹತ್ । ಯದ್ದೂರೇಸನ್ನಿಹಾಭುವಾಃ । ಭುವಾಃ । ೨ । ಭು

೧೦ ೦ ೨೧೦ ೦ ೨ ೧೦ ನ ೨
ವೋವಾ । ೩ । ಭುವೋವಾಹಾಇ । ೨ । ಭುವೋವಾಽ೩ಹಾ

೧ ೨೦ ೦ ೧೦ ೨೧ ೨೦ ೧೦ ೨ ೧ ೨
ಉವಾ । ಇಹಸ್ವರ್ವೈಶ್ವಾನರಾಯಪ್ರದಿಶೋಜ್ಯೋತಿರ್ಬೃಹತ್ । ಓಽ

೨೦ ೧ ೨೦ ೧ ೨೦ ೧೦
೩೧ಮ್ । ೩ । ಆಯೂಃ । ೩ । ಜ್ಯೋತೀಃ । ೩ । ಜ್ಯೋತೋ

೦ ೨೦ ೧೦ ೦ ೨ ೦ ೧೦ ನ ೨
ವಾ । ೩ । ಜ್ಯೋತೋವಾಹಾಇ । ೨ । ಜ್ಯೋತೋವಾಽ೩ಹಾ

ಸ್ತುಹಾಇ । ಇಡಾ । ಈಶೇಹಿಶಕ್ರಸ್ತಮೂತಯೇಹವಾಽ೧ಮಾಽ೩ ಹಾಇ । ಜೇತಾರಮಪರಾಽ೩ । ಜಾಇತಾಮ್ ॥ ಸನ೭ಸ್ವರ್ಷದ ತಾಽ೨೩ಹೋಇ ॥ ದ್ವಾಇಷಾಽ೩೧ಉವಾಽ೨೩ ॥ ಇಟ್ ಸ್ಥ ಇಡಾಽ ೨೩೪೫ ॥ ಕ್ರಾತೂಃ ॥ ಛನ್ದಋತಾಽ೨ಮ್ಬೃಹಾತ್ ॥ ಇಡಾಽ೨೩೪ ೫ ॥ *ದೀ - ೨೩ । ಪ - ೩೫ । ಮಾ - ೨೪ । ಟೀ - ೨ ॥*

ಅಥ ದ್ವಿತೀಯಾಯಾಮೃಚಿ ಪ್ರಥಮಂ ದ್ವಿಪದಾಮಾಹ - **ವಿದಾ ರಾಯೇ ಸುವೀರ್ಯಮ್ಭುವೋ ವಾಜಾನಾಮ್ಪತಿರ್ವಶಾ೮\ಅನ್ವಿತಿ** । ಹೇ ಇನ್ದ್ರ **ಸುವೀರ್ಯಮ್** ಶೋ ಭನೋ ವೀರಃ ಪುತ್ರಃ । ಶೋಭನಪುತ್ರೋದ್ಭವಸಾಮರ್ಥ್ಯಮ್ । ಯದ್ವಾ ಶೋಭನ ವೀರ್ಯಂ ಯುದ್ಧಾದಿಷು ಅಪರಾಜಯಂ । ವಿದಾಃ ಲಮ್ಭಯ ಪ್ರಾಪಯ । ಕಿಮರ್ಥಮ್ । ರಾಯೇ ಧನಾರ್ಥಮ್ । ಧನಂ ರಕ್ಷಿತುಮಿತ್ಯರ್ಥಃ । **ವಾಜಾನಾಂ** ಸೇನಾನಾಂ ಬಲಾನಾಂ ವಾ **ಪತಿಃ** ಸ್ವಾಮೀ ತ್ವಂ **ಭುವಃ** ಭವಸಿ । **ವಶಾನ್** । **ವಶೇಃ** ಕರ್ಮಣಿ ವಶಿರಣ್ಯೋರಿತ್ಯಪ್ರ ತ್ಯಯಃ ಪಾ. ೭-೪-೮೮ । ಕಾಮ್ಯಮಾನಾನರ್ಥಾನ್ **ಅನು** ಅಭಿಲಕ್ಷ್ಯ । ಯಥಾಕಾಮಮಿತ್ಯರ್ಥಃ । ಯದ್ವಾ । **ವಶಾನ್** ತ್ವದಧೀನಾನ್ ಯಜಮಾನಾನ್ **ಭುವಃ** ಭಾವಯಸಿ । ಭವತೇಃ ಪಞ್ಚಮ ಲಕಾರೇ- ಪಾಂ ೩-೪-೭ ರೂಪಮ್ । ಭೂಸುವೋಸ್ತಿಙಿ ಇತಿ ಗುಣ - ಪ್ರತಿಷೇಧಃ ॥

ಅಥ ಸ್ವೀಯಭಾಗಮಾಹ- **ಮ೮\ಹಿಷ್ಠ ವಜ್ರಿನ್ನೃಞ್ಜಸೇ ಯಃ ಶವಿಷ್ಠಃ ಶೂರಾಣಾ ಮ್ । ಯೋ ಮ೮\ಹಿಷ್ಠೋ ಮಘೋನಾಮ್** - ಇತಿ । ಹೇ **ಮ೮\ಹಿಷ್ಠ** ಅತಿಶಯೇನ ಬಲ ವನ್ । **ಯಃ** ಚ **ಮಘೋನಾಮ್** । ಮಘಶಬ್ದೋ ಧನವಾಚೀ । ತದ್ವತಾಂ ಮಧ್ಯೇ **ಮ೮\ ಹಿಷ್ಠಃ** । ಅತಿಶಯೇನ ದಾತಾ ತಸ್ಮಾದಸ್ಮಾಭಿರ್ಧನಾರ್ಥಂ ಪ್ರಸಾಧ್ಯಸೇ ॥

ಅಥೋಪಸರ್ಗಭಾಗಮಾಹ - **ಅ೮\ಶುರ್ನ ಶೋಚಿಃ । ಚಿಕಿತ್ವೋ ಅಭಿ ನೋ** ನಯ ಇತಿ । **ಅಂಶುರ್ನ** ವ್ಯಾಪ್ತ ಆದಿತ್ಯ ಇವ **ಶೋಚಿ**ರ್ದೀಪ್ತೋ ಭವತೀನ್ದ್ರಃ । ಶುಚದೀಪ್ತೌ - ಭ್ವಾ ಆಂ ॥ ಶುಚೇಃ ಶುಚೇರ್ಮತ್ವರ್ಥೀಯಲೋಪಃ - ಶೋಚಿ ಷ್ಮಾನ್ । ಅಥ ಪ್ರತ್ಯಕ್ಷ ಸ್ತುತಿಃ । ಹೇ **ಚಿಕಿತ್ವಃ** ಚಿಕಿತ್ವನ್ । ಮತುವಸೋರುಃ ಸಂಬುದ್ಧೌಛನ್ದಸಿ- ಪಾ. ೮-೩-೧ ಇತಿ ರುತ್ವಮ್ । ಜ್ಞಾನವನ್ನಿಂದ್ರ । **ನಃ** ಅಸ್ಮಾನ್ **ಅಭಿ**ಲಕ್ಷ್ಯ **ನಯ** ಧನಾದಿ ಪ್ರಾಪಯ ॥

ಅಥ ಭಾಗದ್ವಯಂ ಮಿಲಿತ್ವಾಹ – **ಇನ್ದ್ರೋ ವಿದೇ ತಮು ಸ್ತುಹಿ । ಈಶೇ ಹಿ ಶಕ್ರಃ** – ಇತಿ । ಇನ್ದ್ರಃ ಪರಮೈಶ್ವರ್ಯಯುಕ್ತಃ । **ವಿದೇ** ವಿದ್ಯತೇ ಸರ್ವೈರ್ಜ್ಞಾಯತೇ । **ತಮು** ತಮೇ ವೇನ್ದ್ರಂ **ಸ್ತುಹಿ** ಸ್ತುತಿಂ ಕುರ್ವಿತಿ । ಋಷಿರಾತ್ಮಾನಮೇವ ಶಾಸ್ತಿ । **ಹಿ** ಯಸ್ಮಾತ್ **ಶಕ್ರಃ** ಶತ್ರುಹನನಸಮರ್ಥಃ ಇನ್ದ್ರಃ **ಈಶೇ** ಈಷ್ಟೇ ಸರ್ವಸ್ಯೇತಿ ತಸ್ಮಾತ್ ತಮೇವ ಸ್ತು ಹೀತಿ ಸಮನ್ವಯಃ ॥

ಅಥ ಶಾಕ್ವರಭಾಗ ಮಾಹ – **ತಮೂತಯೇ ಹವಾಮಹೇ ಜೇತಾರಮಪರಾ ಜಿತಮ್ । ಸ ನಃ ಸ್ವರ್ಷದತಿ ದ್ವಿಷಃ** ಇತಿ । **ತಮ್** ಇನ್ದ್ರಮ್ **ಊತಯೇ** ಅಸ್ಮದ್ರಕ್ಷಣಾರ್ಥಂ **ಹವಾಮಹೇ** ಆಹ್ವಯಾಮಹೇ । ಕೀದೃಶಮ್ **ಜೇತಾರಮ್** । ಯುದ್ಧೇಷು ಶತ್ರು ಜಯ ಶೀಲಮ್ । ತಾಚ್ಛೀಲ್ಯೇ ತೃನ್ ಪ್ರತ್ಯಯಃ – ಪಾ ೩–೧–೧೩೫ । ಅತಏವ **ಅಪರಾ ಜಿತಮ್** । ನ ಕ್ವಾಪ್ಯನ್ಯೈಃ ಪರಾಜಿತಮ್ । **ಸಃ** ಇನ್ದ್ರಃ **ನಃ** ಅಸ್ಮಾಕಂ **ದ್ವಿಷಃ** ದ್ವೇಷ್ಟ್ರೂನ್ **ಅತಿಸ್ವರ್ಷತ್** ಅತ್ಯರ್ಥಮುಪತಪತು ವಿನಾಶಯತು । ಸ್ವೃ ಶಬ್ದೋಪತಾಪಯೋರಿತ್ಯಸ್ಮಾತ್ ಪಞ್ಚಮ ಲಕಾರೇರೂಪಮ್ । ಅಥ ವಾ ಸ್ವರತಿರ್ಗತಿಕರ್ಮಾ – ನಿಘಂ ೨–೧೪–೫೪ ಅಸ್ಮತ್ತಃ ಶತ್ರೂನತಿಗಮಯತು ಅತಿ ಪಾರಯತು । ತಥಾ ಚ ಬಹ್ವೃಚಾಃ – ಸ ನಃ ಪರ್ಷದಿತ್ಯಾಮನನ್ತಿ ॥

ಅಥೋಪಸರ್ಗಭಾಗ ಮಾಹ – **ಕ್ರತುಶ್ಛನ್ದ ಋತಮ್ಬೃಹತ್** – ಇತಿ । ಶತ್ರುಹನನಾನನ್ತರಂ **ಕ್ರತುಃ** ಅಸ್ಮಾಭಿರನುಷ್ಠೀಯಮಾನಂ ಕರ್ಮ । **ಛನ್ದಃ** ಗಾಯತ್ರ್ಯಾದಿಕಂ ಶಸ್ತ್ರ ಲಕ್ಷಣಮ್ । **ಋತಮ್** ಉದಕಮ್ । ಸೋಮರಸ ಇತ್ಯರ್ಥಃ । ಯದ್ವಾ । ಋತಂ ಸತ್ಯಭೂತಮ್ ಕರ್ಮಫಲಂ ತತ್ಸರ್ವಂ **ಬೃಹತ್** ಪ್ರಭೂತಮಸ್ತ್ವಿತಿ ಶೇಷಃ ॥

**ಸುವೀರ್ಯಂ** – ಶುಭಕರ ಪುರುಷಾರ್ಥಗಳನ್ನು ಸಾಧಿಸುವ ಸುಪುತ್ರರನ್ನು ಪಡೆಯುವ ಸಾಮರ್ಥ್ಯವನ್ನೂ ಯುದ್ಧದಲ್ಲಿ ಅಪಜಯ ಪಡೆಯದ ಯದ್ಧವೀರರನ್ನೂ **ರಾಯೇ** ಧನದಸಂಪಾದನೆಯಲ್ಲೂ ರಕ್ಷಣೆಯಲ್ಲೂ ಸಮರ್ಥರಾದವರನ್ನೂ **ವಿದಾಃ** ಪಡೆಯೋಣ. **ವಾಜಾನಾಮ್ಪತಿಃ** ಸೇನಾಪತಿಯಾಗಿ **ವಶಾನ್** ಅಪೇಕ್ಷಿತ ಇಷ್ಟಾರ್ಥಗಳನ್ನೂ ಮುಖ್ಯಸ್ಥರಾದ ಯಜಮಾನರುಗಳನ್ನೂ ಅಧೀನಮಾಡಿಕೊಂಡು **ಅನುಭುವತಿ** ಗುರಿಯನ್ನು ತಲುಪಲು ಅನುಕೂಲಮಾಡಿಕೊಳ್ಳೋಣ ಅನುಭವಿಸೋಣ. **ಮಂಹಿಷ್ಠಃ** ಅತಿ ಶಯದಾನಶೀಲನಾದ ಮಹಾಮಹಿಮನಾದ ಬಲಶಾಲಿಯಾದ **ವಜ್ರಿನ್** ವಜ್ರಾಯುಧಧಾರಿಯಾದ ಇನ್ದ್ರನೇ **ಶೂರಾಣಾಮ್ ಯಃ ಶವಿಷ್ಠಃ** ಶೂರಾದಿಶೂರರಲ್ಲೂ ಬಲಾಧಿಕ್ಯನಾದವನೇ **ಋಞ್ಜಸೇ** ಪ್ರಸನ್ನನಾಗು ॥ ೬೪೪ ॥

*ಬಲ್ಲೆ ನೀನು ಭಗವಂತ ! ಸಿರಿಯನುರೆ*
*ಗಳಿಪ ರೀತಿಗಳ; ಬಲವಂತ !*
*ಎಲ್ಲ ಶಕ್ತಿಗಳ ನಾಯಕ ನೀನಯ್ !*
*ಶರಣಾಗತರಂ ಕರುಣಿಸಿರಯ್ ! ॥*

**ಮಘೋನಾಮ್** ಧನವಂತರಲ್ಲೇ ಹಿರಿಯನಾದವನೇ **ಚಿಕಿತ್ವಃ** ಜ್ಞಾನವಂತನೇ **ಅಂಶುಃ ನ ಶೋಚಿಃ** ಆದಿತ್ಯನಂತೆ ಪ್ರಕಾಶಿಸುತ್ತಿರುವವನೇ **ನಃ** ನಮ್ಮನ್ನು **ಅಭಿ** ಗುರಿಯನ್ನು ತಲುಪುವ ಮಾರ್ಗದಲ್ಲಿ **ನಯ** ಕರೆದುಕೊಂಡು ಹೋಗು. **ಇನ್ದ್ರಃ** ಪರಮೈಶ್ವರ್ಯ ಶಾಲಿಯಾದ ಇನ್ದ್ರನು **ವಿದೇ** ಒಲಿಯುವಂತೆ ಪ್ರಾಪ್ತನಾಗುವಂತೆ **ತಮು ಉ ಸ್ತುಹಿ** ಅವನನ್ನೇ ಸ್ತುತಿಸಿ. ॥ ೬೪೫ ॥

*ಭಾಗ್ಯವಂತರೊಳ್ ಮಿಗಿಲಾದಂ*
*ಕಾಂತಿಮಂತರೊಳ್ ಸೊಗಸಾದಂ ।*
*ರವಿಯಂ ಮೀರಿಪ ಜಾಣಂ ಶಕ್ರಂ*
*ತಿಳಿವ ಹಾದಿಗರಿಗೊಲಿಗೆಂದುಂ ॥*

**ಶಕ್ರಃ** ಹಿ **ಈಶೇ** ಶಕ್ತಿಶಾಲಿಯಾದ ಶತ್ರುಹನನ ಸಮರ್ಥನಾದ ಇನ್ದ್ರನೇ ಎಲ್ಲರ ಶಾಸಕನೂ ಒಡೆಯನೂ ಆಗಿದ್ದಾನೆ. **ತಮ್** ಆ **ಅಪರಾಜಿತಮ್** ಸೋಲನ್ನೇ ಅರಿಯದ **ಜೇತಾರಮ್** ಜಯಶೀಲನನ್ನು **ಊತಯೇ** ನಮ್ಮ ರಕ್ಷಣೆ ಮಾಡುವುದಕ್ಕಾಗಿ **ಹವಾಮಹೇ** ಆಹ್ವಾನಿಸುತ್ತೇವೆ. **ಸಃ** ಆ ಇನ್ದ್ರನು **ನಃ** ನಮ್ಮ **ದ್ವಿಷಃ** ದ್ವೇಷಭಾವನೆಗಳನ್ನು ದ್ವೇಷಿಗಳನ್ನು ಶತ್ರುಗಳನ್ನು **ಅತಿ ಸ್ವರ್ಷತು** ಅತಿಶಯವಾಗಿ ನಾಶಮಾಡಲಿ. ಹೀಗೆ ಶತ್ರುನಾಶವಾದ ನಂತರ **ಕ್ರತುಃ** ನಾವು ಅನುಷ್ಠಾನಮಾಡುವ ಯಜ್ಞಾದಿ ಸತ್ಕರ್ಮಗಳು **ಛನ್ದಃ** ಗಾಯತ್ರ್ಯಾದಿ ಛನ್ದಸ್ಸುಗಳಿಂದ ಕೂಡಿದ ವೇದಾಧ್ಯಯನಾದಿಗಳು **ಋತಮ್** ಯಜ್ಞಾಂಗವಾದ ಸೋಮ ಪಾನಾದಿಗಳು ಸತ್ಯ ಭೂತವಾದ ಕರ್ಮಫಲಗಳು **ಬೃಹತ್** ಅತಿಶಯ ಪ್ರಮಾಣದಲ್ಲಿ ಸಮೃದ್ಧಿಯಾಗುವುವು. ॥ ೬೪೬ ॥

*ಸರ್ವಶಕ್ತಿಯುತನಿಂದ್ರನಾರ್ತಿಜನ–*
*–ಪರ್ವಕಾರಿ; ಜಯಶಾಲಿ, ಬಲಿ ।*
*ರಿಪುಗಳ ಸೀಳುವ ಕುಶಲಿಯವಂ*
*ಚಿತ್ತಪಾಳು ಲೋಕಪ್ರಿಯಲೀಲಂ ॥*

ವಜ್ರಾಯುಧಧಾರಿಯೂ ಬಲಾಧಿಕ್ಯನೂ ಶೂರನೂ ಮಹಾಮಹಿಮನೂ ಬಹು ಧನವಂತನೂ ದಾನಶೀಲನೂ ಆದ ಇನ್ದ್ರ ಭಗವಂತನನ್ನು ಪ್ರಸನ್ನನಾಗಿಸಿಕೊಂಡು ಶ್ರೇಷ್ಠ ಪುರುಷಾರ್ಥ ಸಾಧಕರೂ ವೀರರೂ ಧನಸಂಪಾದಕರೂ ಆದ ಪುತ್ರರನ್ನು ಪಡೆಯಲೂ ಅಪೇಕ್ಷಿತ ಇಷ್ಟಾರ್ಥಗಳನ್ನು ಪಡೆದು ಅನುಭವಿಸಲೂ ಜೀವನದ ಗುರಿಯನ್ನು ತಲು ಪಲೂ ಸಮರ್ಥರಾಗೋಣ. ಜೀವನದ ಶ್ರೇಷ್ಠತಮ ಗುರಿಯನ್ನು ತಲುಪುವ ಮಾರ್ಗದಲ್ಲಿ ನಮ್ಮನ್ನು ಸುಗಮವಾಗಿ ಕರೆದುಕೊಂಡು ಹೋಗುವಂತೆ ಜ್ಞಾನಿಯೂ ಸೂರ್ಯನಂತೆ ಪ್ರಕಾಶಿಸುತ್ತಿರುವವನೂ ಪರಮೈಶ್ವರ್ಯ ಶಾಲಿಯೂ ದಾನಿಯೂ ಶತ್ರುಗಳನ್ನು ನಾಶ ಮಾಡುವವನೂ ಎಲ್ಲರ ಒಡೆಯನೂ ಆದ ಇನ್ದ್ರಭಗವಂತನನ್ನು ಒಲಿಸಿಕೊಳ್ಳಲು ಸ್ತುತಿಸೋಣ. ದುಷ್ಟರ ನಾಶವಾದನಂತರ ನಾವು ಅನುಷ್ಠಾನಮಾಡುವ ಸತ್ಯಜ್ಞಾನಾದಿ

ಸತ್ಕರ್ಮಗಳೂ ವೇದಶಾಸ್ತ್ರಾದಿಗಳ ಅಧ್ಯಯನವೂ ಸೋಮಪಾನಾದಿ ಕರ್ಮಫಲಗಳೂ ಸಮೃದ್ಧಿ ಪಡೆಯಬೇಕೆಂದು ಆಶಿಸಿ ನಮ್ಮ ದುಷ್ಟತನವನ್ನೂ ನಮ್ಮನ್ನು ಬಾಧಿಸುವ ಶತ್ರುಗಳನ್ನೂ ನಾಶಮಾಡಲೂ ನಮ್ಮನ್ನು ರಕ್ಷಿಸಲೂ ಸೋಲನ್ನರಿಯದ ಸದಾ ಜಯಶಾಲಿಯಾಗಿರುವ ಇನ್ದ್ರ ಭಗವಂತನನ್ನು ಆಹ್ವಾನಿಸುತ್ತೇವೆ.

## ಋಕ್ – ೬೪೭–೬೪೯

### ತೃತೀಯಾಸ್ತಿಸ್ರಃ

॥ ಪ್ರಜಾಪತಿ ಋಷಿಃ ಶಾಕ್ವರಾಃ ಇನ್ದ್ರತ್ರೈಲೋಕ್ಯಾತ್ಮಾ ॥

೨ ೩ ೧ ೨ ೩ ೧ ೨ ೩ ೧ ೨ ೩ ೧ ೨

**ಇನ್ದ್ರಂ ಧನಸ್ಯ ಸಾತಯೇ ಹವಾಮಹೇ ಜೇತಾರಮಪರಾಜಿತಮ್ ।**

೧ ೨ ೩ ೨ ೩ ೨ ೩ ೧ ೨ ೩ ೨ ೩ ೧ ೨

**ಸ ನಃ ಸ್ವರ್ಷದತಿ ದ್ವಿಷಃ ಸ ನಃ ಸ್ವರ್ಷದತಿ ದ್ವಿಷಃ ॥ ೬೪೭ ॥**

೧ ೨ರ ೧ ೨ರ ೩ ೧ ೨ ೩ ೧ ೨ರ ೧ ೨ರ

ಇನ್ದ್ರಮ್–ಧನಸ್ಯ–ಸಾತಯೇ–ಹವಾಮಹೇ । ಜೇತಾರಮ್–ಅಪರಾಜಿತಂ–ಅ

೩ ೨ ೩ ೧ ೨ರ ೧ ೨ರ ೨ ೩ ೧

–ಪರಾಜಿತಮ್ ॥ ಸಃ–ನಃ–ಸ್ವರ್ಷತ್–ಅತಿ–ದ್ವಿಷಃ । ಸಃ–ನಃ–ಸ್ವರ್ಷ ತ್–ಅ

೨ರ ೧ ೨ರ

ತಿ–ದ್ವಿಷಃ ॥ ೬೪೭ ॥

॥ ಪ್ರಜಾಪತಿ ಋಷಿಃ ಶಾಕ್ವರಾಃ ಇನ್ದ್ರತ್ರೈಲೋಕ್ಯಾತ್ಮಾ ॥

೧ ೨ ೩ ೧ ೨ ೩ ೧ ೨ರ

**ಪೂರ್ವಸ್ಯ ಯತ್ತೇ ಅದ್ರಿವೋಽಽಶುರ್ಮದಾಯ ।**

೩ ೧ ೨ರ ೩ ೧ ೨

**ಸುಮ್ನ ಆ ಧೇಹಿ ನೋ ವಸೋ ಪೂರ್ತಿಃ ಶವಿಷ್ಠ ಶಸ್ಯತೇ ॥ ೬೪೮ ॥**

೧ ೨ರ ೩ ೧ ೨ರ ೩ ೨

ಪೂರ್ವಸ್ಯ–ಯತ್–ತೇ–ಅದ್ರಿವಃ–ಅ–ದ್ರಿವಃ। ಅಽಽಶುಃ–ಮದಾಯ ॥ ಸುಮ್ನೇ

೩ ೨ ೩

–ಆ–ಧೇಹಿ–ನಃ–ವಸೋ ॥ ಪೂರ್ತಿಃ–ಶವಿಷ್ಠ–ಶಸ್ಯತೇ ॥ ೬೪೮ ॥

॥ ಪ್ರಜಾಪತಿ ಋಷಿಃ ಶಾಕ್ವರಾಃ ಇನ್ದ್ರತ್ರೈಲೋಕ್ಯಾತ್ಮಾ ॥

ವಶೀ ಹಿ ಶಕ್ರೋ ನೂನಂ ತನ್ನವ್ಯಂ ಸನ್ಯಸೇ । ಪ್ರಭೋ ಜನಸ್ಯ ವೃತ್ರಹನ್ತ್ಸಮರ್ಯೇಷು ಬ್ರವಾವಹೈ । ಶೂರೋ ಯೋ ಗೋಷು ಗಚ್ಛತಿ ಸಖಾ ಸುಶೇವೋ ಅದ್ವಯುಃ ॥ ೬೪೯ ॥

ವಶೀ-ಹಿ-ಶಕ್ರಃ । ನೂನಮ್-ತಮ್-ನವ್ಯಮ್-ಸನ್ಯಸೇ ॥ ಪ್ರಭೋ-ಪ್ರ-ಭೋ -ಜನಸ್ಯ-ವೃತ್ರಹನ್-ವೃತ್ರ- ಹನ್ । ಸಮ್-ಅರ್ಯೇಷು-ಬ್ರವಾವಹೈ ॥ ಶೂರಃ-ಯಃ -ಗೋಷು-ಗಚ್ಛತಿ । ಸಖಾ-ಸ-ಖಾ-ಸುಶೇವಃ-ಸು-ಶೇವಃ-ಅದ್ವಯುಃ-ಅ-ದ್ವಯುಃ ॥ ೬೪೯ ॥

ಮಹಾನಾಮ್ನ್ಯಃ ಸಿಮಾಃ । ಇನ್ದ್ರಃ ಶಕ್ವರೀನ್ದ್ರಃ ।

ಏऽ೨ । ಇನ್ದ್ರನ್ಧನಸ್ಯಸಾತಯಾಇ ॥ ಹವಾಮಹೇಜೇತಾರಮಪರಾऽ೨ । ಜಿತಮಾऽ೩೧ಉವಾऽ೨೩ । ಈऽ೩೪ಡಾ ॥ ಏऽ೨ ॥ ಸನಃಸ್ವರ್ಷದತಿದ್ವಿಷಾಃ ॥ ಸಾನಃಸ್ವರ್ಷದತಾऽ೨ಇ । ದ್ವಿಷಆऽ೩೧ಉವಾऽ೨೩ । ಈऽ೩೪ಡಾ । ಪೂರ್ವಸ್ಯಯತ್ತಆऽ೨ । ದ್ರಿವಆऽ೩೧ಉವಾ೨೩ । ಈऽ೩೪ಡಾ । ಅꣳಶುರ್ಮದಾಯಾऽ೨ । ಹಾऽ೩೧ಉವಾऽ೨೩ । ಈऽ೩೪ಡಾ । ಸೂ । ಮ್ನಆಧೇಹಿನೋವಸಾಉ ॥ ಪೂರ್ತಿಃ ॥ ಶವಿಷ್ಠಶಾऽ೨ಇಸ್ಯತಾಇ । ಇಡಾ ॥ ಪೂರ್ತಿಃ ॥ ಶವಿಷ್ಠಶಾऽ೨ಇಸ್ಯತಾ

೨ ೧ — ೧ ೦
ಇ ॥ ಅಥಾ॥ ಪೂರ್ತ್ರೀಃ ॥ ಶವಿಷ್ಠಶಾಽ೨ಸ್ಯತಾಇ । ಇಡಾ । ವಶೀ

೦ ೦ ೨ ೨ ೨ ೧೦
ಹಿಶಕ್ರೋಽನೂ ನಸ್ತನ್ನವ್ಯ೮\ಸಾಽ೧ನ್ಯಾಽ೩ಸಾಇ । ಪ್ರಭೋಽಜನಸ್ಯ

೨ ೪ ೫ ೧ ೦ ೧
ವಾಽ೩ । ತ್ರಾಹಾನ್ ॥ ಸಮರ್ಯೇಷುಬ್ರವಾಽ೨೩ಹೋಇ ॥ ವಾ

೨ ೧ ೧೧೧ ೧ ೨
ಹಾಽ೩೧ಉವಾಽ೨೩ ॥ ಇಟ್ ಸ್ಥಿ ಇಡಾಽ೨೩೪೫ ॥ ಶೂರೋ ॥

೦ ೧೦ — ೧ ೧೧೧ ೧ ೨ ೧೦
ಯೋಗೋಷುಗಾಽ೨ಚ್ಛತಾಇ ॥ ಇಡಾಽ೨೩೪೫ ॥ ಸಾಖಾಸುಶೇ

— ೧ ೧೧೧
ವೋಽ೨ದ್ವಯೂಃ ॥ ಇಡಾಽ೨೩೪೫ ॥

*ದೀ – ೧೮ । ಪ – ೩೯ । ಮಾ – ೨೫ । ಡು । ೩ ॥*

ಅಥ ತೃತೀಯಸ್ಯಾಮೃಚಿ ಪ್ರಥಮಂ ದ್ವಿಪದಾಮಾಹ – ಇನ್ದ್ರನ್ಧನಸ್ಯ ಸಾತಯೇ ಹವಾಮಹೇಜೇ ತಾರಮಪರಾಜಿತಮ್ – ಇತಿ । ಧನಸ್ಯ ಸಾತಯೇ ಲಾಭಾರ್ಥಮ್ । ಶೇಷಂ ಸ್ಪಷ್ಟಮ್ ॥

ಅಥ ಶಾಕ್ವರಭಾಗ ಮಾಹ –ಸ ನಃ ಸ್ಪರ್ಷದತಿದ್ವಿಷಃ । ಪೂರ್ವಸ್ಯ ಯತ್ತೇ ಅದ್ರಿವಃ – ಇತಿ । ಸಃ ಇನ್ದ್ರೋ ನಃ ಅಸ್ಮಾಕಂ ದ್ವಿಷಃ ದ್ವೇಷ್ಟೄನ್ ಅತಿ ಸ್ಪರ್ಷತ್ ವಿನಾಶಯತು । ಯೇಽಪ್ಯನ್ಯೇಽಸ್ವಯಂ ದ್ವೇಷಂ ನ ಕುರ್ವನ್ತಿ ತಥಾಪಿ ದ್ವಿಷಃ ಅಸ್ಮಾಭಿರ್ದ್ವೇಷ್ಯಾಃ ತಾನಪ್ಯತಿ ಸ್ಪರ್ಷತ್ । ಸರ್ವತ್ರ ಹಿ ವೇದೇಷು ಯೋಽಸ್ಮಾನ್ ದ್ವೇಷ್ಟಿ ಯಂ ಚ ವಯಂ ದ್ವಿಷ್ಮಃ ಇತ್ಯಾದೌ ದ್ವೇಷ್ಟೄಣಾಂ ದ್ವೇಷ್ಯಾಣಾಞ್ಚ ವಿನಾಶಃ ಪ್ರಾರ್ಥ್ಯತೇ ॥ ಹೇ ಅದ್ರಿವಃ । ಅದ್ರಯಃ ಪರ್ವತಾಃ । ತದ್ವನ್ನಿನ್ದ್ರ । ಇನ್ದ್ರೋ ಯತಃ ಪರ್ವತಾನ್ ಭಿನತ್ತಿ ಅತಃ ಪರ್ವ ತೇನ್ದ್ರಯೋರ್ಭೇದ್ಯಭೇದಕಸಮ್ಬನ್ಧಃ । ಯದ್ವಾ । ಆದೃಣತ್ಯಾಸುರರಕ್ಷಾಂಸೀತಿ ವಾ ಅನ್ಯೈಃ ಸ್ವಯಂ ನ ದೀರ್ಯತೇ ಪ್ರಹತ ಇತಿ ವಾ ಅದ್ರಿರ್ವಜ್ರಃ । ತದ್ವನ್ನಿನ್ದ್ರ । ಪೂರ್ವಸ್ಯ ಪುರಾತನಸ್ಯ ತೇ ತವ ಯತ್ ಧನಮಸ್ತಿ ತನ್ಮಹ್ಯಮಾಹರೇತಿ ಶೇಷಃ ॥

ಅಥಾಪರಭಾಗಮಾಹ – ಅಂಶುರ್ಮ್ಮದಾಯ ಸುಮ್ನ ಆ ಧೇಹಿ ನೋ ವಸಃ – ಇತಿ । ಹೇ ಇನ್ದ್ರ । ಯೋಽಯಮ್ ಅಂಶುಃ । ಸೋಮಲತಾಖಣ್ಡಃ ತಜ್ಜನ್ಯಃ ಸೋಮರಸ ಇತ್ಯರ್ಥಃ । ಜನ್ಯೇ ಜನಕಸ್ಯವ್ಯವಹಾರಃ । ಸ ಚ ಮದಾಯ ಭವತಿ । ಯಸ್ಮಾದಸ್ಮಾಭಿರ್ದತ್ತಃ ಸೋಮಃ ತವ ಮದಾಯ ಭವತಿ ತಸ್ಮಾತ್ ಹೇ ವಸೋ ನಿವಾಸಹೇತೋ ಇನ್ದ್ರ । ನಃ ಅಸ್ಮಾನ್ ಸುಮ್ನೇ ಸುಖೇ ಧನೇ ವಾ । ಆಧೇಹಿ ಸ್ಥಾಪಯ ॥

ಅಥ ಸ್ವೀಯಪರಭಾಗೌ ಸಹೈವಾಹ – ಪೂರ್ತಿಃ ಶವಿಷ್ಠಶಸ್ಯತೇ । ವಶೀಹಿ ಶಕ್ರಃ ಇತಿ । ಹೇ ಶವಿಷ್ಠ ಬಲವತ್ತಮೇನ್ದ್ರತವ ಪೂರ್ತಿಃ ತ್ವದೀಯಂ ಧನಪೂರಣಮ್ । ದಾನ ಮಿತ್ಯರ್ಥಃ । ಶಸ್ಯತೇ ಸರ್ವೈಃ ಸ್ತೂಯತೇ । ಹಿ ಯಸ್ಮಾತ್ ಶಕ್ರಃ ಸಮರ್ಥ ಇನ್ದ್ರ ವಶೀ ಸರ್ವಸ್ಯ ನಿಯನ್ತಾ ಖಲು । ಯದ್ವಾ । ವಶೀ ವಸುವಿಷಯಸ್ವೀಕಾರವಾನ್ । ಅತ ಏವ ಶಕ್ರಃ ದಾನೇ ಶಕ್ತಿಮಾನ್ । ತಸ್ಮಾತ್ತೇ ದಾನಂ ಸ್ತೂಯತೇ ॥

ಅಥ ಶಾಕ್ವರ ಭಾಗಮಾಹ–ನೂನನ್ತ್ವನ್ನವ್ಯಂ ಸನ್ಯಸೇ । ಪ್ರಭೋ ಜನಸ್ಯ ವೃತ್ರಹನ್ರ್ಸತಸಮರ್ಯೇಷುಬ್ರವಾವಹೈ – ಇತಿ । ಹೇ ಪ್ರಭೋ ಸರ್ವಸ್ಯ ಜನಸ್ಯ ಸ್ವಾಮಿನ್ । ಹೇ ವೃತ್ರಹನ್ । ವೃತ್ರೋ ಮಾರಕಃ ಶತ್ರುಃ । ತತ್ಹನನವಾನ್ । ಶತ್ರುಘಾತಿನ್ । ನವ್ಯಮ್ ನೂತನಮ್ ವಲೀಪಲಿತಾದಿ ಲಕ್ಷಣೇನ ಪುರಾಣತ್ವೇನ ವರ್ಜಿತಮ್ ತಂ ಇನ್ದ್ರಂ ತ್ವಾಂ ನೂನಮ್ ಅವಶ್ಯಂ ಸನ್ಯಸೇ ಅಹಂ ಸಮ್ಯಕ್ ನಿತರಾಂ ಪ್ರಕ್ಷಿಪಾಮಿ । ಅಸ್ಮಿನ್ ಕರ್ಮಣಿ ಹವಿಷೋ ಭೋಕ್ತೃತ್ವೇನ ಸ್ಥಾಪಯಾಮೀತ್ಯರ್ಥಃ ಅಸು ಕ್ಷೇಪಣೇ–ದಿಂ ಪಂ – ವ್ಯತ್ಯಯೇನಾತ್ಮನೇ ಪದಮ್ – ವಿಕರಣ – ಲುಕ್ ಚ । ಸಹ ಸುಪೇತ್ಯತ್ರ ಪಾ. ೨–೧–೪ – ಸಹೇತಿ ಯೋಗವಿಭಾಗಾತ್ ಸನ್ನಿಭ್ಯಾಮುಪಸರ್ಗಾಭ್ಯಾಂ ಸಹ ಸಮಾಸಃ । ಯದ್ವಾ । ಹೇ ಇನ್ದ್ರ । ನವ್ಯಮಿತಿ ಕ್ರಿಯಾವಿಶೇಷಣಮ್ । ನೂತನಮ್ ಅನ್ಯೈಃ ಅಕ್ಷತ ಪೂರ್ವಂ ಯಥಾ ಭವತಿ ತಥಾ ನೂನಮ್ ಇದಾನೀಂ ಸನ್ಯಸೇ ಅಸ್ಮಾಭಿಃ ಸೇವ್ಯಸೇ । ಷಣಸಮ್ಭಕ್ತೌ । ಕಿ ರೂಪಮ್ । ಛನ್ದಸ್ಯನೇಕಮಪಿ ಸಾಕಾಙ್ಕ್ಷಮ್ – ಪಾ. ೮–೧–೩೫ – ಇತ್ಯಾಖ್ಯಾತಸ್ಯೋದಾತ್ತತ್ವಮ್ । ಕಿಙ್ಚ । ಅರ್ಯೇಷು ಪ್ರಾಪ್ತವ್ಯೇಷು ಯಜ್ಞಾದಿಷು ಕರ್ಮಸು ಸಂಬ್ರವಾವಹೈ ತ್ವಞ್ಚಾಹಞ್ಚಾವಾಂ ಸಮ್ಭಾಷಾಂ ಕರವಾವಹೈ । ಸರ್ವಸ್ಯ ಯಜಮಾನಸ್ಯೇನ್ದ್ರ ಸಾಕ್ಷಾತ್ಕಾರೋ ಭವತಿ । ತಮರ್ಥಂ ದ್ಯೋತಯಿತುಮೇಕತ್ರ ಸಹವದನಮಿತ್ಯರ್ಥಃ ॥

ಅಥೋಪಸರ್ಗಭಾಗಮಾಹ – ಶೂರೋ ಯೋ ಗೋಷು ಗಚ್ಛತಿ ಸಖಾ ಸುಶೇ ವೋ ಅದ್ವಯುಃ – ಇತಿ । ಯ ಇನ್ದ್ರಃ ಶೂರಃ ಸಮರ್ಥಃ । ಗೋಷು ನಿಮಿತ್ತ ಸಪ್ತ ಮೀ ಪಾ. ೨–೩–೩೭ ॥ ಗೋಷು ಗವಾರ್ಥಂ ಯುದ್ಧಾದಿಷು ಶತ್ರುಭ್ಯೋ ಗವಾ ನಯನಾರ್ಥಂ ಗಚ್ಛತೀತ್ಯರ್ಥಃ । ಕೀದೃಶಃ । ಸಖಾ ಸಮಾನಖ್ಯಾನಃ । ಸಂವಿವದತ್ಯನ್ತ ಸ್ನಿಗ್ಧಃ । ಅತ ಏವ ಸುಶೇವಃ ಶೋಭನಸುಖಃ ಅಕೃಚ್ಛ್ರೇಣ ಸುಖಕರಃ। ಅದ್ವಯುಃ ದ್ವಯ ರಹಿತಃ ಸತ್ಯಾನೃತವರ್ಜಿತಃ । ಕೇವಲ ಸತ್ಯ ಸ್ವರೂಪ ಇತ್ಯರ್ಥಃ । ಯದ್ವಾ । ಯದ್ದ್ವನ್ದ್ವಂ ಮನಸಿ ವಚಸಿ ಕ್ರಿಯಯಾಂ ವಾನ್ಯತ್ ಕಾರ್ಯಮಿತಿ ತದ್ರಹಿತಃ । ಅಥವಾ ಏತತ್ಸದೃಶೋ ದ್ವಿತೀಯೋ ನಾಸ್ತೀತ್ಯದ್ವಯುಃ – ಮತ್ವರ್ಥೀಯ ಉ ಪ್ರತ್ಯಯಃ – ಅಪಿ ಚ । ಏತಾಭ್ಯಾಮ್ ಯಜಮಾನೇನ್ದ್ರಯೋಃ ಸಮ್ಭಾಷಾ ಪ್ರಕಾರೋಽಭಿಧೀಯತೇ । ಹೇ ಇನ್ದ್ರ ಯಃ ಯಜಮಾನೋಽಸ್ತಿ ಸೋಽಯಂ ಗೋಷು ದಕ್ಷಿಣಾರೂಪೇಣದಾತವ್ಯಾಸು ಉದಾರಃ ಸನ್ ಪ್ರವರ್ತತೇ । ಸರ್ವಾ ಅಪಿ ದದಾತೀತಿ । ಯದ್ವಾ ಗೋಷು ಆಶ್ರಯಣ – ಕ್ಷೀರಾನಯನಾರ್ಥಂ ಗಚ್ಛತೀತ್ಯೇವಂ ಮದೀಯಂ ಗುಣಂ ತ್ವಂ ದೇವೇಷು ಬ್ರೂಹಿ । ಅಹಮಿನ್ದ್ರೋಽಯಂ ಸ್ತೋತ್ರೇಷು ಸಖಾ ಸನ್ ಸುಖಕರೋ ಭವತೀತ್ಯೇವಂ ತ್ವದೀಯಂ ಗುಣಮನ್ಯೇಷು ಸ್ತೋತೃಷು ಬ್ರವೀಮೀತಿ । ಏವ ಮೃಚೋ ವ್ಯಾಖ್ಯಾತಾಃ ॥

**ಧನಸ್ಯ ಸಾತಯೇ** ವಿದ್ಯೆ ಮೋಕ್ಷ ಐಶ್ವರ್ಯಾದಿ ಧನಾಪೇಕ್ಷೆಯಿಂದ **ಅಪರಾಜಿತಮ್** ಸೋಲನ್ನೇ ಅರಿಯದ **ಜೇತಾರಮ್** ವಿಜಯಶಾಲಿಯಾದ **ಇನ್ದ್ರಮ್** ಇನ್ದ್ರಭಗವಂತನನ್ನು **ಹವಾಮಹೇ** ಆಮನ್ತ್ರಿಸುತ್ತೇವೆ ಆಹ್ವಾನಿಸುತ್ತೇವೆ. **ಸಃ** ಆ ಇನ್ದ್ರ ಭಗವಂತನು **ನಃ ದ್ವಿಷಃ** ನಮ್ಮ ದ್ವೇಷಿಗಳನ್ನೂ ಶತ್ರುಗಳನ್ನೂ ನಮ್ಮ ದುಷ್ಟಭಾವನೆಗಳನ್ನೂ **ಅತಿಸ್ಪರ್ಷತ್** ಅತಿಶಯವಾಗಿ ನಾಶಮಾಡಲಿ ॥ ೬೪೭ ॥

*ಸಿರಿಯನೊಂದುವೊಂದುರುಯತ್ನದೊಳ–*
*–ಸ್ಖಲಿತಬಲಂ ಬಲವೈರಿವಲಂ ।*
*ಜಯಕಾವ್ಯಕಲಾಕಲ್ಪವೃಕ್ಷನವ–*
*–ನಭ್ಯುದಯಾಸ್ಪದನೆಂದೆಂದುಂ ॥*

**ಅದ್ರಿವಃ** ಪರ್ವತಗಳನ್ನೂ ಛಿದ್ರಗೊಳಿಸುವಷ್ಟು ಬಲಶಾಲಿಯಾದ ವಜ್ರದಂಡ ಧಾರಿಯಾದ ಓಜಸ್ವಿಯಾದ ಇನ್ದ್ರನೇ **ಪೂರ್ವಸ್ಯ ತೇ ಯತ್** ಸನಾತನನಾದ ಪುರಾತನನಾದ ನಿನ್ನಲ್ಲಿರುವ ಧನಾದಿಗಳನ್ನು ನಿನ್ನ ಉಪಾಸಕರಾದ ಹಕ್ಕುದಾರರಾದ ನಮಗೆ ಬಳುವಳಿಯಾಗಿ ಅನುಗ್ರಹಿಸು. **ಅಂಶುಃ ಮದಾಯ** ನಿನ್ನ ಲೇಶಮಾತ್ರ ವೀಕ್ಷಣೆಯೂ ಕಟಾಕ್ಷವೂ ಅಥವಾ ಸೋಮಪಾನದಿಂದಾಗುವ ಸಂತೋಷವೂ ಆನಂದದಾಯಕವಾಗಿರುತ್ತದೆ. **ನಃ ಸುಮ್ನೇ ಆಧೇಹಿ** ನಮ್ಮನ್ನು ಸುಖವಾಗಿರುವಂತೆ ಸೂಕ್ತವಾದ ವ್ಯವಸ್ಥೆಯನ್ನು ಮಾಡಿಕೊಡು. **ಶವಿಷ್ಠ** ಬಹುಬಲಶಾಲಿಯೂ ಶ್ರೇಷ್ಠನೂ ಆದ ಇನ್ದ್ರನೇ **ಪೂರ್ತಿಃ** ನಮ್ಮ ಇಷ್ಟಾರ್ಥಗಳನ್ನೂ ಪೂರ್ಣಗೊಳಿಸಿ ಪಾಲಿಸಿ ಪೋಷಿಸುವ ನೀನು ಸಮಸ್ತರಿಂದಲೂ ಪ್ರಶಂಸಿಸಲ್ಪಡುತ್ತೀಯೆ ಸ್ತುತಿಸಲ್ಪಡುತ್ತೀಯೆ. **ಶಕ್ರಃ** ಸರ್ವಶಕ್ತನೂ ದಾನಿಯೂ ಆಗಿದ್ದು **ವಶೀ ಹಿ** ಸಮಸ್ತವನ್ನೂ ನಿನ್ನ ಸ್ವಾಧೀನದಲ್ಲಿ ವಶದಲ್ಲಿ ಇಟ್ಟು ಕೊಂಡಿರುವೆಯಷ್ಟೆ. ॥ ೬೪೮ ॥

*ಆನಂದವರ್ಧನಮಲಾ ಭವದಾದಿರೂಪಂ*
*ಆಸ್ವಾದವರ್ಧನಮಲಾ ಭವದೀಯತೇಜಂ ।*
*ಅದ್ವಂದ್ವಶೀಲನಮಲಾ ಭವದೀಯಶೌರ್ಯಂ*
*ಅದ್ವೈತಭಾವನಮಲಾ ಹರಿ ! ನಿನ್ನ ತತ್ತ್ವಂ ॥*

**ಜನಸ್ಯ ಪ್ರಭೋ** ಸಮಸ್ತ ಜನರ ಸ್ವಾಮಿಯೇ **ವೃತ್ರಹನ್** ವೃತ್ರ ಸಂಕೇತವಾದ ದುಷ್ಟರನ್ನು ನಾಶಮಾಡುವವನೇ ಪಾಪ ದೂರಮಾಡುವವನೇ **ತತ್ ನೂನಮ್ ನವ್ಯಮ್ ಸಂನ್ಯಸೇ** ಬಾಲ್ಯ ಕೌಮಾರ ಯೌವನ ವೃದ್ಧಾಪ್ಯಾದಿ ಲಕ್ಷಣಗಳಿಂದ ವರ್ಜಿತನಾದ ನಿತ್ಯಯುವಕನಾದ ಇನ್ದ್ರನನ್ನು ಅವಶ್ಯವಾಗಿಯೂ ನಿಶ್ಚಯವಾಗಿಯೂ ಯಜ್ಞಾದಿ ಕರ್ಮಗಳಲ್ಲಿ ಆಹ್ವಾನಿಸಿ ಹವಿಸ್ಸನ್ನು ಸ್ವೀಕರಿಸಲು ವ್ಯವಸ್ಥೆಮಾಡುತ್ತೇವೆ. ಜೀವನವು ಕ್ಷಣ ಭಂಗುರವಾಗಿರುವುದರಿಂದ ನಿಶ್ಚಯವಾಗಿಯೂ ಸಂಸಾರವನ್ನು ತ್ಯಜಿಸಿ ಸಂನ್ಯಾಸಾಶ್ರಮವನ್ನು ಸ್ವೀಕರಿಸುತ್ತೇವೆ. ಈ ನವ್ಯವಾದ ಸ್ತುತಿಗಳನ್ನು ನಿನಗೆ ಅರ್ಪಿಸುತ್ತಾ

ನಿನ್ನನ್ನು ನನ್ನ ಹೃದಯದಲ್ಲಿ ಸ್ಥಾಪಿಸಿಕೊಳ್ಳುತ್ತೇವೆ. **ಅರ್ಯೇಷು** ಅರ್ಥ ಪ್ರಾಪ್ತಿಯ ಯಜ್ಞಾದಿ ಕರ್ಮಗಳಲ್ಲಿ ಶ್ರೇಷ್ಠ ಪುರುಷರಲ್ಲಿ ಜನವರ್ಗದ ಯಜಮಾನ ಸ್ವಾಮಿ ರಾಜ ಆದಿ ಶಾಸಕರಲ್ಲಿ – ಅರ್ಯಃ ಸ್ವಾಮಿ ವೈಶ್ಯಯೋಃ *ಅಷ್ಟಾ ೩–೧–೧೦೩* // ಸಂನ್ಯಾಸಿಗಳೇ ಆದಿ ತ್ಯಾಗಿಗಳಲ್ಲಿ **ಸಮ್ರುವಾವಹೈ** ನಿನ್ನನ್ನು ಪ್ರಶಂಸಿಸುತ್ತಾ ಸ್ತುತಿಸುತ್ತೇವೆ. ನಿನ್ನ ಬಗೆಗೆ ಪರಸ್ಪರ ಸಂವಾದ ಮಾಡುತ್ತಿರುತ್ತೇವೆ. **ಯಃ** ಯಾವ ಇನ್ದ್ರನು **ಶೂರಃ** ಪರಾಕ್ರಮಿ ಸಮರ್ಥಜ್ಞಾನಿ **ಸಖಾ** ಪವಿತ್ರ ಮನಸ್ಸಿನ ಸರಳವಾದ ಮಿತ್ರ **ಸುಶೇವಃ** ನ್ಯೂನತೆ ಇಲ್ಲದ ಸುಖವನ್ನು ನೀಡುವ ಆನಂದ ಸ್ವರೂಪ ಉತ್ತಮ ಸೇವೆಯನ್ನು ಮಾಡುವ **ಅದ್ವಯುಃ** ಅತಿ ಶ್ರೇಷ್ಠನಾದ ಅದ್ವಿತೀಯನಾದ ಮನಸ್ಸು ವಚನ ಕ್ರಿಯೆಗಳಲ್ಲಿ ದ್ವಂದ್ವವಿಲ್ಲದ ಸತ್ಯಾನೃತ ವರ್ಜಿತನಾದ ಕೇವಲ ಸತ್ಯಸ್ವರೂಪಿಯಾದ **ಗೋಷು** ಗೋವುಗಳ ರಕ್ಷಣಾರ್ಥವಾಗಿ ಯುದ್ಧಕ್ಕೆ ಹೋಗುವ ಪೃಥಿವೀ ಆದಿ ಸಮಸ್ತ ಲೋಕಗಳಲ್ಲಿ – ಇಮೇ ವೈ ಲೋಕಾ ಗೌಃ ಶತಂ *೬–೧–೨–೩೪* // ಗಚ್ಛತಿ ವ್ಯಾಪಕವಾಗಿ ಓಡಾಡುತ್ತಾನೆ. ॥ ೬೪೯ ॥

*ವೃತ್ರಾಸುರಹರ !ಹರಿ ! ಸುಪ–*
*–ವಿತ್ರಾಶ್ರಯ ! ನಿನ್ನನೆಂದುಮಾರಾಧಿಪೆವಯ್ !*
*ಗೋತ್ರಪ್ರಿಯ ! ಗೋರೂಪಾ–*
*–ತ್ಮತ್ರಾಣಪರಾಯಣಾ ! ಚಿದದ್ವಯದೀಪಾ ! //*

ವಿದ್ಯೆ ಆದಿ ಧನಾಪೇಕ್ಷೆಯಿಂದಲೂ ನಮ್ಮಲ್ಲಿರುವ ದುಷ್ಟ ಪ್ರವೃತ್ತಿಗಳನ್ನೂ ನಮ್ಮ ಶತ್ರುಗಳನ್ನೂ ನಾಶಮಾಡಲೂ ಸೋಲನ್ನರಿಯದ ವಿಜಯಶಾಲಿಯಾದ ಇನ್ದ್ರ ಭಗವಂತನನ್ನು ನಮ್ಮಲ್ಲಿಗೆ ಆಹ್ವಾನಿಸುತ್ತೇವೆ. ಬಹುಬಲಶಾಲಿಯೂ ವಜ್ರಧಾರಿಯೂ ಸನಾತನನೂ ಪುರಾತನನೂ ಆದ ಇನ್ದ್ರನೇ ನೀನು ಬೀರುವ ಕಿರುಕಟಾಕ್ಷವೂ ಸಹ ಆನಂದ ಪ್ರದವಾಗಿದ್ದು ನಿನ್ನ ಉಪಾಸಕರೂ ಹಕ್ಕುದಾರರೂ ಆದ ನಮಗೆ ನಿನ್ನ ಧನಾದಿಗಳನ್ನು ಅನುಗ್ರಹಿಸಿ ಸುಖವಾಗಿರುವಂತೆ ಪಾಲಿಸಿ ಪೋಷಿಸು. ಸರ್ವಶಕ್ತನೂ ಸಮಸ್ತವನ್ನೂ ತನ್ನ ಅಧೀನದಲ್ಲಿಟ್ಟುಕೊಂಡಿರುವವನೂ ಎಲ್ಲರ ಪೋಷಕನೂ ರಕ್ಷಕನೂ ಆದ ನೀನು ಎಲ್ಲರಿಂದಲೂ ಪ್ರಶಂಸಿಸಲ್ಪಡುತ್ತಿರುವೆ. ನಿತ್ಯಯುವಕನೂ ಸಮರ್ಥನೂ ಯುದ್ಧಗಳಲ್ಲಿ ಭಾಗವಹಿಸುವವನೂ ಮಿತ್ರನೂ ಸುಖದಾಯಕನೂ ಜ್ಞಾನಿಯೂ ದ್ವಂದ್ವಾತೀತನೂ ಎಲ್ಲಾ ಲೋಕಗಳಲ್ಲೂ ವ್ಯಾಪಿಸಿರುವವನೂ ಆದ ಇನ್ದ್ರ ಭಗವಂತನನ್ನು ಹವಿಸ್ಸುಗಳನ್ನು ಸ್ವೀಕರಿಸಲು ಆಹ್ವಾನಿಸುವ ನವನವೀನ ಸ್ತುತಿಗಳಿಂದ ಹೊಗಳುವೆವು. ನನ್ನ ಹೃದಯದಲ್ಲಿ ಸ್ಥಾಪಿಸಿಕೊಳ್ಳುವೆ. ತ್ಯಾಗಿಗಳೊಡನೆಯೂ ರಾಜರುಗಳೊಡನೆಯೂ ಪರಸ್ಪರ ಸಂವಾದದಲ್ಲಿ ನಿನ್ನ ಮಹಾಮಹಿಮೆಯು ಪ್ರಸ್ತಾಪಿಸಲ್ಪಡುತ್ತಿರುತ್ತದೆ ಪ್ರಶಂಸಿಸಲ್ಪಡು ತ್ತಿರುತ್ತದೆ.

**ಶಾಕ್ವರ** – ತ್ರಿಣವದಿಂದ ಶಾಕ್ವರಸಾಮ ಉದಯವಾಗಿದೆ –ಯಜು ೧೩–೫೮ । ಹೇಮಂತ ಋತು ಹಾಗೂ ತ್ರಿಣವ ಸ್ತೋಮದೊಂದಿಗೆ ಶಾಕ್ವರ ಸಾಮವನ್ನು

ಗುರುತಿಸುತ್ತಾ – ಬಲೇನ ಶಕ್ವರೀಃ ಸಹೋ ಹವಿರಿನ್ದ್ರೇ ವಯೋದಧುಃ – ಯಜು ೨೧–೨೭ । ಎಂದಿದೆ. ಶಾಕ್ವರದ ಸಂಬಂಧವನ್ನು ಬೃಹಸ್ಪತಿ ದೇವತೆಯೊಂದಿಗೆ ಗುರುತಿಸಲಾಗಿದೆ. ತೈ.ಸಂ ೧–೮–೧೩–೧ ರಿಂದ ೫ । ತ್ರಿಣವಸ್ತೋಮವೂ ಶಾಕ್ವರ ಸಾಮವೂ ಅನ್ತರಿಕ್ಷದ ಆಯತನ–ಆಶ್ರಯ ಸ್ಥಾನವಾಗಿದೆ. ಹೇಮನ್ತಪಙ್ಕ್ತಿಸ್ತ್ರಿಣವಸ್ತೋಮಃ ಶಾಕ್ವರಂ ಸಾಮೇತ್ಯನ್ತರಿ ಕ್ಷಾಯತನಾನಿ – ನಿರು ೭–೧೧ । ಶಾಕ್ವರ ಸಾಮಗಾನದ ಉಪಾಸನೆಯನ್ನು ಲೋಕಗಳೊಂದಿಗೆ ಸಮೀಕರಿಸಿ – ಪೃಥಿವೀ ಹಿಂಕಾರೋ ಅನ್ತರಿಕ್ಷಂ ಪ್ರಸ್ತಾವೋ ದ್ಯೌರುದ್ಗೀಥೋ ದಿಶಃ ಪ್ರತಿಹಾರಃ ಸಮುದ್ರೋ ನಿಧನಮೇತಾಃ ಶಕ್ವರ್ಯೋ ಲೋಕೇಷು ಪ್ರೋತಾಃ ॥ ಪೃಥಿವಿಯು ಹಿಂಕಾರ ಅನ್ತರಿಕ್ಷವು ಪ್ರಸ್ತಾವ ದ್ಯುಲೋಕವು ಉದ್ಗೀಥ ದಿಕ್ಕುಗಳು ಪ್ರತಿಹಾರ ಸಮುದ್ರವು ನಿಧನ. ಶಕ್ವರ್ಯಃ ನಿತ್ಯ ಬಹುವಚನ ಶಕ್ವರೀ ಸಾಮಗಾನಗಳು ಮಹಾನಾಮ್ನೀ ಋಕ್ಕುಗಳಿಂದ ಉದಯವಾಗಿವೆ. **ಆಪೋ ವೈ ಮಹಾನಾಮ್ನೀ ಅಪ್ಸು ಲೋಕಾಃ ಪ್ರತಿಷ್ಠಿತಾಃ** ಎಂದಿರುವಂತೆ ನೀರಿನ ಸಂಬಂಧವು ಮಹಾನಾಮ್ನಿಯೊಂದಿಗಿರುವುದರಿಂದ ಶಾಕ್ವರ ಸಾಮವು ಲೋಕಗಳಲ್ಲಿ ಪ್ರೋತವಾಗಿದೆ ಪ್ರತಿಷ್ಠಿತವಾಗಿದೆ – ಛಾಂ ಉ ೨–೧೭–೧.೨ ೨–೩–೧ ॥

## ಋಕ್ – ೬೫೦

**ಪಂಚ ಪುರೀಷಪದಾನಿ ।**

॥ ಪ್ರಜಾಪತಿ ಋಷಿಃ ಗಾಯತ್ರೀ ಪದಪಙ್ಕ್ತಿರ್ವಾ ಇನ್ದ್ರಸ್ತ್ರೈಲೋಕ್ಯಾತ್ಮಾ ॥

ಇ ೨ ೨ ೩ ೧ ೨ ೩ ೧ ೨ ೩ ೧ ೨೦
**ಏವಾ ಹ್ಯೇऽ೩ವ । ಏವಾ ಹ್ಯಗ್ನೇ । ಏವಾ ಹೀನ್ದ್ರ । ಏವಾಹಿಪೂಷನ್**
೩ ೧ ೨೦
**। ಏವಾಹಿದೇವಾಃ ॥ ೬೫೦ ॥**

ಸ್ವ ೬ । ಉ ೨ । ಧಾ ೨೪ । ಖೀ ॥ ದ ೯ ॥

೩ ೨ ೩ ೨ ೩ ೨ ೩ ೨ ೩ ೨ ೩
**ಏವ–ಹಿ–ಏವ । ಏವ–ಹಿ–ಅಗ್ನೇ ॥ ಏವ–ಹಿ–ಇನ್ದ್ರ । ಏವ–ಹಿ–ಪೂಷನ್ ॥**
೨ ೩
**ಏವ–ಹಿ–ದೇವಾಃ ॥** ಆ ೮ । ಅ ೭ । ಪ ೭೯ । ರೋ । ದಶತಿ – ೬ ॥

ಇತಿ ಪಂಚಪುರೀಷಪದಾನಿ
ಇತಿ ಮಹಾನಾಮ್ನ್ಯಾರ್ಚಿಕಃ ಸಮಾಪ್ತಃ
ಇತಿ ಸಪ್ತಮಃ ಪ್ರಪಾಠಕಃ

ಇತಿ ಸಾಮವೇದ ಸಂಹಿತಾಯಾಂ ಪೂರ್ವಾರ್ಚಿಕಃ ಸಮಾಪ್ತಃ

ಪಂಚಪುರೀಷ ಪದಾನಿ । ಗಾಯತ್ರೀ । ಪದಪಙ್ಕ್ತಿ ಪಙ್ಕ್ತಿರ್ವಾ ॥ ಇನ್ದ್ರಃ ॥

ಆಇವಾ ॥ ಹಿಯೇವಾಽ೨೩೪೫ । ಹೋಽಇ ॥ ಹೋ । ವಾಹಾಽ
೩೧ಉವಾಽ೨೩ ॥ ಈಽ೩೪ಡಾ ॥ ಆಇವಾ ॥ ಹಿಯಗ್ನಾಽ೨೩೪
೫ಇ । ಹೋಽಇ ॥ ಹೋ । ವಾಹಾಽ೩೧ಉವಾಽ೨೩ ॥ ಈಽ೩೪
ಡಾ ॥ ಆಇವಾ ॥ ಹಿಇನ್ದ್ರಾಽ೨೩೪೫ । ಹೋಽಇ ॥ ಹೋ । ವಾ
ಹಾಽ೩೧ಉವಾಽ೨೩ ॥ ಈಽ೩೪ಡಾ ॥ ಆಇವಾ ॥ ಹಿಪೂಷಾಽ೨
೩೪೫ನ್ । ಹೋಽಇ ॥ ಹೋ । ವಾಹಾಽ೩೧ಉವಾಽ೨೩ ॥ ಈಽ
೩೪ಡಾ ॥ ಆಇವಾ ॥ ಹಿದೇವಾಽ೨೩೪೫ಃ । ಹೋಽಇ ॥ ಹೋ ।
ವಾಹಾಽ೩೧ಉವಾಽ೨೩ ॥ ಈಽ೩೪ಡಾ ॥

*ದೀ - ೮ / ಪ - ೩೦ / ಮಾ-೧೯ / ಸೋ / ೪ //*

॥ ಇತಿ ಪಂಚಪುರೀಷಪದಾನಿ ॥
॥ ಇತಿ ಮಹಾನಾಮ್ನೀ ಪರ್ವಂ ಸಮಾಪ್ತಮ್ ॥

ಅಥ ಪುರೀಷಪದಾನಿ ವ್ಯಾಖ್ಯಾಯನ್ತೇ - ತಾನಿ ಸರ್ವಾಣ್ಯೈನ್ದ್ರಾಣ್ಯೈವ । ತದ್ಗುಣ ಯೋಗಾತ್ತತ್ರತ್ಯತೃತೀಯಪದೇನ ವಾಗ್ನ್ಯಾದಿಪದೈರಿನ್ದ್ರ ಏವ ಸಮ್ಬೋಧ್ಯ ಸ್ತೂಯತೇ॥

ತತ್ರ ಪ್ರಥಮಂ ಪದಮಾಹ - ಏವಾಹ್ಯೇಽ೩ವೇತಿ । ಹೇ ಇನ್ದ್ರ ತ್ವಮ್ ಏವ ಹಿ ಏವಮುಕ್ತಗುಣೋಸಿ ಖಲು । ಯದ್ವಾ । ಏವ ಶಬ್ದಃ ಇಣ್‌ಗತೌ । ಇತ್ಯಸ್ಮಾತ್ ಇಣ್ಶೀಭ್ಯಾಂ ವಣ್ - ಉಣಾದಿ ೧-೧-೫೧ ॥ ಇತಿ ವಣ್‌ಪ್ರತ್ಯಯಾನ್ತಃ । ಸು ಲುಕ್ - ಪಾ. ೭-೧-೩೯ । ಅಸ್ಮ ದೀಯಂ ಯಜ್ಞಂ ಪ್ರತ್ಯೇವ ಆಗನ್ತಾ ಭವೇತಿ ಶೇಷಃ । ಏವೇತಿ ಪುನರುಕ್ತಿರಾದರಾರ್ಥಾ ॥

ಅಥ ದ್ವಿತೀಯಂ ಪದಮಾಹ – ಏವಾ ಹ್ಯಗ್ನೇ ಇತಿ । ಹೇ ಅಗ್ನೇ ಅಗ್ರ ಸ್ಯನೇತಃ ದೇವಾನಾಂ ಪುರತೋಗನ್ತರಿನ್ದ್ರ । ಏತದಾತ್ಮಕ ವಾ ಇನ್ದ್ರ । **ಏವ** ಹಿ ಏವಂ ಗುಣಯುಕ್ತಃ ಖಲು ಯಜ್ಞಂ ಪ್ರತ್ಯಾಗನ್ತಾ ವಾ ಭವ ॥

ಅಥ ತೃತೀಯಂ ಪದಮಾಹ – ಏವಾ ಹೀನ್ದ್ರೇತಿ । ಹೇ ಇನ್ದ್ರ ಪರಮೈಶ್ವರ್ಯಗುಣಯುಕ್ತ । ಯದ್ವಾ ಇನ್ದೇ ಪ್ರಕಾಶಯತಿ ತೇಜಸಾ ಭೂತಾನೀತೀನ್ದ್ರಃ । ಅಥವಾ ಇದಂ ಸರ್ವಂ ಜಗತ್ ಪ್ರಥಮಮಪಶ್ಯದಿತೀನ್ದ್ರಃ । ತಥಾಚ ಐತರೇಯೋಪನಿಷದಿ ೭–೩–೧೪ ಶ್ರೂಯತೇ–ಇದಮದರ್ಶಮಿತಿ । ತಸ್ಮಾದಿದನ್ದ್ರೋ ನಾಮೇದನ್ದ್ರೋ ಉ ವೈ ನಾಮ ತಮಿದನ್ದ್ರಂ ಸನ್ತಮಿನ್ದ್ರ ಇತ್ಯಾಚಕ್ಷತೇ ಪರೋಕ್ಷೇಣೇತಿ । ತಾದೃಶಮ್ ಏವಹಿ ॥

ಅಥ ಚತುರ್ಥಂ ಪದಮಾಹ – **ಏವಾಹಿಪೂಷನ್ನಿತಿ** । **ಪೂಷನ್** ವಿಶ್ವಸ್ಯ ಪೋಷಕ ಏತದಾತ್ಮಕ ವಾ ಇನ್ದ್ರ । ಏವಮುಕ್ತಗುಣಃ ಖಲು ತ್ವಮ್ ॥

ಅಥ ಪಞ್ಚಮಂ ಪದಮಾಹ – ಏವಾ ಹಿ ದೇವಾಃ ಇತಿ । ಹೇ ದೇವಾಃ ಇನ್ದ್ರಾ ದಯಃ । ಯದ್ವಾ ಸರ್ವದೇವಾನಾಂ ಬಲರೂಪೇಣ ಇನ್ದ್ರಸ್ಯಾವಸ್ಥಾನಾತ್ ಇನ್ದ್ರ ಏವ ಬಹುತ್ವೇನ ಸಮ್ಬೋಧ್ಯತೇ । ಹೇ ಇನ್ದ್ರ ಏವಮುಕ್ತಗುಣಃ ಖಲುತ್ವಮ್ । ಯದ್ವಾ ಏವಶಬ್ದಾತ್ ಸುಪಾಂಸುಲುಗಿತಿ – ಪಾ. ೭,೧,೩೯ ಜಸೋಲುಕ್ । ಅಸ್ಮದೀಯಂ ಯಜ್ಞಂ ಆಗನ್ತಾರೋ ಭವತೇತ್ಯರ್ಥಃ ॥ ೧೦–೧ ॥

ಮಹಾನಾಮ್ನಿಯ ನಾಲ್ಕನೆಯದಾದ ಪಂಚ ಪುರೀಷಪದವೆಂಬ ಹೆಸರಿನ ಈ ಸಾಮಗಾನವು ಛನ್ದಾರ್ಚಿಕದ ೬೫೦ನೆಯ ಋಕ್ ಮನ್ತ್ರದಲ್ಲಿರುವ ಐದುಪದಗಳಿಂದ ಉದಯವಾಗಿರುವುದರಿಂದ ಪಂಚ ಪುರೀಷಪದಾನಿ ಎಂಬ ಹೆಸರಿನಿಂದಲೇ ವ್ಯವಹೃತ ವಾಗಿದೆ. ಪ್ರತಿಹಾರ ಭಕ್ತಿಯು ಪುರೀಷಪದಗಳಲ್ಲಿನ ಸ್ತೋಭಾಕ್ಷರಗಳ ಮಧ್ಯೆ ಇರುತ್ತದೆ – ಲಾ ಶ್ರೌಸೂ ೭–೫೭ ॥ **ಪುರೀಷಂ** ತೃಪ್ತಿಕರವಾದ ಪೂರಕವಾದ ಫಲವತ್ತಾದ ಪರಿ ಪೂರ್ಣವಾದ ಮಹಾನ್ ಸರ್ವಪೋಷಕ ಅನ್ನರಸ ಸರ್ವಪೋಷಕ ಅನ್ನ. **ಪೃ**– ಪಾಲಿನ ಪೂರಣ ಅಥವಾ **ಪೄ** – ತುಂಬುವಂತೆ ಮಾಡು ಎಂಬ ಅರ್ಥದ ಧಾತುವಿನಿಂದ **ಪುರೀಷಮ್** ಪದ ನಿಷ್ಪನ್ನವಾಗಿದೆ. ನಿರು ೨–೨೨ । ಋ.ಸಂ ೧೦–೨೭–೧, ೩ ॥ **ಐನ್ದ್ರಂ** ಹಿ ಪುರೀಷಮ್ – ಶ.ಬ್ರಾ ೮–೭–೩–೭ ॥ **ವಯಾಂಸಿ** ಪುರೀಷಮ್ । **ನಕ್ಷತ್ರಾಣಿ** ಪುರೀಷಮ್ । **ದಕ್ಷಿಣಾಃ** ಪುರೀಷಮ್ । **ದೇವಾಃ** ಪುರೀಷಮ್ । ಶ.ಬ್ರಾ ೮–೭–೪,೧೩ರಿಂದ೧೭ ॥ ಇನ್ದ್ರಾದಿಗಳೆಲ್ಲಾ ಅಗ್ನಿ ಶಬ್ದದಿಂದಲೇ ಸ್ತುತಿಸಲ್ಪಡುತ್ತಾರೆ – ನಿರು ೭–೧೮ ॥ ಇನ್ದ್ರಂ ಮಿತ್ರಂ.... । ಏಕಂಸದ್ವಿಪ್ರಾ..... । ಋ.ಸಂ ೧–೧೬೪–೧೬ ॥ ಇತ್ಯಾದಿಗಳಲ್ಲಿರುವ ಅರ್ಥಗಳೆಲ್ಲವೂ **ಪುರೀಷ** ಪದದಲ್ಲಿ ಅಡಗಿದ್ದು ಗಾನರೂಪದಲ್ಲಿ ವ್ಯಕ್ತವಾಗಿ ಮಹತ್ವವನ್ನು ಪಡೆದಿದೆ.

**ಏವ ಹಿ ಏವ ಹಿ ಅಗ್ನೇ** ಈ ಹಿಂದೆ ಪರಿಪರಿಯಾಗಿ ಸ್ತುತಿಸಿ ವರ್ಣಿಸಿರುವ ಸಮಸ್ತ ಗುಣಗಣಗಳ ನಿಧಿಯಾಗಿರುವ ಅಗ್ನಿನಾಮಕನಾಗಿ ಪ್ರಕಾಶಮಾನನಾಗಿ ದೇವತೆ

ಗಳ ಮುಂದಾಳಾಗಿ ಯಜ್ಞಾದಿ ಸಮಸ್ತ ಕರ್ಮಗಳನ್ನೂ ನೆರವೇರಿಸಿಕೊಡುತ್ತಿರುವ ನೀನೇ ಪರಮಾತ್ಮನೆಂಬುದು ಸತ್ಯ ಇದು ಹೀಗೆಯೇ ಸರಿ. – ಏಕ ಏಷಾಮಿತ್ಯಾಗ್ನಿಃ ಪೃಥಿವೀಂ ದಹತಿ ಸರ್ವಮೇಕೋऽಭಿ ವಿಪಶ್ಯತಿ ಕರ್ಮಭಿರಾದಿತ್ಯೋ ಗತಿರೇಕಸ್ಯ ದೃಶ್ಯತೇ – ನಿರು ೧೨–೨೭ ॥ **ಏವ ಹಿ ಇನ್ದ್ರ** ಇನ್ದ್ರನಾಮಕನಾಗಿ ಪರಮೈಶ್ವರ್ಯದಿಂದಲೂ ತೇಜೋ ವಿಶೇಷಗಳಿಂದಲೂ ಭೂತಜಾತವನ್ನು ಬೆಳಗುತ್ತಾ ಪರೋಕ್ಷಪ್ರಿಯನಾಗಿ ಜಗತ್ತನ್ನು ಪ್ರಪ್ರಥಮವಾಗಿ ವೀಕ್ಷಿಸಿದ ನೀನೇ ಪರಮಾತ್ಮನೆಂಬುದು ಸತ್ಯ ಇದು ಹೀಗೆಯೇ ಸ – ಇಮ ಮೇವಾಗ್ನಿಂ ಮಹಾನ್ತಮಾತ್ಮಾ ನಮೇಕಮಾತ್ಮಾನಂ ಬಹುಧಾ ಮೇಧಾವಿನೋ ವದನ್ತೀನ್ದ್ರಂ ಮಿತ್ರಂ ವರುಣಮಗ್ನಿಂ ದಿವ್ಯಂಚ ಗರುತ್ಮಂತಮ್ – ಇತಿ ನಿರು ೭–೧೮ ॥ **ಏವ ಹಿ ಪೂಷನ್** ಪೂಷನ್ ನಾಮಕನಾಗಿ ಸಮಸ್ತ ಜಗತ್ತನ್ನೂ ಪೋಷಿಸಿ ಪಾಲಿಸುತ್ತಿರುವ ನೀನೇ ಪರಮಾತ್ಮನೆಂಬುದು ಸತ್ಯ ಇದು ಹೀಗೆಯೇ ಸರಿ. ಏವ ಹಿ ದೇವಾಃ ಸಮಷ್ಟಿ ನಾಮವಾದ ಬಹುವಚನದ ದಿವ್ಯಗುಣಯುಕ್ತವಾದ ದೇವಾಃ ನಾಮದಿಂದ ಕರೆಸಿ ಕೊಳ್ಳುವ ಮನೋವೇದ್ಯನಾದ ನೀನೇ ಪರಮಾತ್ಮನೆಂಬುದು ಸತ್ಯ ಇದು ಹೀಗೆಯೇ ಸರಿ.

ಪರಮಾತ್ಮನೇ ಪೂರ್ಣಪುರುಷನಾಮದಿಂದ ಈ ಜಗತ್ತು ನಿನ್ನ ಪೂರ್ಣತೆಯ ಸ್ಮರಣೆಯನ್ನೇ ತರುತ್ತಿದೆ. ಅಗ್ನಿನಾಮದಿಂದ ನಿನ್ನ ಮುಂದಾಳುತನವೇ ದಾರಿ ದೀಪವಾಗಿದೆ. ಇನ್ದ್ರನಾಮದಿಂದ ನಿನ್ನ ಪರಮೈಶ್ವರ್ಯದ ರೂಪವೇ ಪ್ರಶಂಸಿ ಸಲ್ಪಡುತ್ತಿದೆ. ಪೂಷನ್ ನಾಮದಿಂದ ನಿನ್ನ ಪಾಲನೆ ಪೋಷಣೆಗಳ ಯಶೋಗಾನ ವಾಗುತ್ತಿದೆ. ದೇವತೆಗಳೆಂಬ ಬಹುವಚನದಿಂದ ದೇದೀಪ್ಯನಾದ ನಿನ್ನ ದಿವ್ಯಗುಣಗಳ ಸ್ತುತಿ ಪ್ರಾರ್ಥನೆ ಉಪಾಸನೆಗಳಲ್ಲಿ ನಾವು ನಮ್ಮನ್ನು ತೊಡಗಿಸಿಕೊಂಡಿದ್ದೇವೆ.

*ಪೂರ್ಣ ಪುರುಷನೇ ! ನೀನಗ್ನಿ ! ಅಗ್ರಣಿಯೆ ಬಾ !*
*ಋದ್ಧಿಕರ, ಶಕ್ತ ! ಬಾ ! ಪೂಷ ! ಪುಷ್ಟಿಕರ ಬಾ !*
*ದೇವತಾ ಸಂಜ್ಞೆಯಿಂ ಸಕಲನುತನೆ ಸಾರಮ್ !*

ಇತಿ ಮಹಾನಾಮ್ನೀ ಋಕ್ ಪದ ಗಾನ ವ್ಯಾಖ್ಯಾನಂ ಸಮಾಪ್ತಮ್
ಇತಿ ಸಾಮವೇದ ಸಂಹಿತಾಯಾಂ ಪೂರ್ವಾರ್ಚಿಕಃ ಸಮಾಪ್ತಃ

ಪ್ರಸ್ಕಣ್ವಃ ಕಾಣ್ವಃ । ಅನುಷ್ಟುಪ್ । ಸೂರ್ಯಃ ॥

**ಉದ್ವಯಂ ತಮಸಸ್ಪರಿ ಜ್ಯೋತಿಷ್ಪಶ್ಯಂತ್ತ ಉತ್ತರಮ್ ।**
**ದೇವಂ ದೇವತ್ರಾ ಸೂರ್ಯ ಮಗನ್ಮ ಜ್ಯೋತಿರುತ್ತಮಮ್ ॥**

ಋ.ಸಂ. ೧–೫೦–೧೦ ॥

ಉತ್ । ವಯಮ್ । ತಮಸಃ । ಪರಿ । ಜ್ಯೋತಿಃ । ಪಶ್ಯನ್ತಃ ।

ಉತ್ಽತರಮ್ । ದೇವಂ । ದೇವಽತ್ರಾ । ಸೂರ್ಯಮ್ । ಅಗನ್ಮ ।

ಜ್ಯೋತಿಃ । ಉತ್ಽತಮಮ್ ॥ ೧-೫೦-೧೦ ॥

॥ ಶಂಯಾದಪತ್ಯಃ । ಉದ್ವಯಾಮೇಕಂಸಾಮ । ಅನುಷ್ಟುಪ್ ಸೂರ್ಯಃ ॥

ಉದ್ವಯಾಽ೬ಮೇ ॥ ತಮಽ೩ಸಾಸ್ಪರಾಽ೨೩ । ಜ್ಯೋತಿಽಪಶ್ಯನ್ತಾಉ ತ್ತಾರಾಽ೨ಮ್ ॥ ಸ್ವಽಪಶ್ಯನ್ತಾಉತ್ತಾರಾಽ೨ಮ್ ॥ ದೇವಂದೇವ ತ್ರಾಸೂರಾಽ೨ಯಾಽ೨೩೪ಔಹೋವಾ ॥ ಅಗನ್ಮಜ್ಯೋತಿರುತ್ತಮಾಽ ೧ಮ್ ॥ *ದೀ - ೮ / ಪ - ೬ / ಮಾ - ೭ / ಟೇ / ೫ //*

ಯದ್ಯಪ್ಯಯಂ ಭಾಗೋ ಆರ್ಚ್ಚಿಕಗ್ರನ್ಥಸ್ಯ ಋಗ್ ಲಕ್ಷಣಶೂನ್ಯತ್ವಾತ್ ಪ್ರತ್ಯುತಾಸ್ಯ ಋಙ್ಮೂಲಕಗಾನತ್ವಮೇವ ಸ್ಫುಟಮ್ ಪರಮೇತನ್ಮೂಲರ್ಚ್ಚಸ್ತು ಛನ್ದಸ್ಯೇವಾರ್ಚ್ಚಿಕೇ ದೃಶ್ಯತೇಽತಸ್ತಸ್ಯೈವ ಪರಿಶಿಷ್ಟಮಿತಿ ವ್ಯವಹ್ರಿಯತೇಽಸ್ಮಾಭಿಃ, ಋಗ್ಗಾನಾತ್ಮಕ ಸ್ಯಾಸ್ಯ ಸಾಮವೇದೀಯ-ಮನ್ತ್ರ- ಭಾಗಸ್ಯ ವ್ಯಾಖ್ಯಾನೇ ಋಗಂಶಸ್ಯೈವ ಪ್ರಾಧಾನ್ಯಾತ್ ಭಾಷ್ಯಕಾರಾದಿಭಿಸ್ತಥೈವ ವ್ಯವಹಾರಾತ್ ಗಾನಗ್ರನ್ಥಾನೇವ ಪ್ರಧಾನೋಭಯತ್ರಾತ್ರ ಪ್ರಕಾಶೇಽಪ್ರವೃತ್ತತ್ವಾದೃಕ್ಪರಿಚಯ ಪೂರ್ವ ಕಸ್ಯೈವ ಗಾನ ಪರಿಚಯಸ್ಯ ನ್ಯಾಯ್ಯ ತ್ವಾಚ್ಚ । ನ ಸನ್ತಿಚೇಹಶ್ರುತಾನಾಂ ಸಾಮ್ನಾಂ ಕತಿಪಯಾನಾ ಮೃಚಃ, ತೇಷಾಂ ಸ್ತೋಭ ಮಾತ್ರ - ಮೂಲಕತ್ವಾತ್ ತೇಽಖಿಲ ಸ್ತೋಭಾಃ ಸಾಯಣಾದಿಭಿರ್ವ್ಯಾಖ್ಯಾತಾನವೇತ್ಯದ್ಯಾಪಿ ನ ಜ್ಞಾಯತೇ ಪರಂ ತತ್ ಪುಸ್ತಕನ್ತ್ವಧೀತಮ ಸ್ಮಾಬಿರಾರ್ಚ್ಚಿಕಪದ - ಗ್ರನ್ಥಾಧ್ಯಯ ನಾತ್ ಪ್ರಾಗೇವೇತಿ ತಮಪಿ ವಿಚ್ಛಿದ್ಯ ಯಥಾ ಗಾನಮಿಹದರ್ಶಯಿಷ್ಯೇ ॥ ಸಾಮಶ್ರಮಿ - ಛನ್ದಾರ್ಚಿಕ ಪರಿಶಿಷ್ಟಮ್॥

ಶಂಯಾದಪತ್ಯ ಸಾಮಗಾನದ ಋಕ್ ಛನ್ದಾರ್ಚಿಕದಲ್ಲಿ ನಿರ್ದೇಶಿತವಿಲ್ಲವಾಗಿ ಋಕ್ ರಹಿತ ಸಾಮವೆಂದು ಪರಿಶಿಷ್ಟವಾಗಿಕೊಟ್ಟಿದೆ. ಸಾಮವೇದದಲ್ಲಿ ಈ ಋಕ್ ಇಲ್ಲ ವಾಗಿ ಸಾಯಣರು ಇದಕ್ಕೆ ಭಾಷ್ಯವನ್ನು ಬರೆದಿಲ್ಲ. ಪರಂಪರೆಯಾಗಿ ಬಂದಿ ರುವುದರಿಂದ ಸಾಮಗಾನವನ್ನು ಇಲ್ಲಿ ಸೇರಿಸಿದೆ ಎಂದಿದ್ದಾರೆ. ಋಗ್ವೇದದಲ್ಲಿ ಈ ಋಕ್

ಪದ ಸಾಯಣ ಭಾಷ್ಯಗಳು ಶ್ರೀ ಜಯಚಾಮರಾಜೇಂದ್ರ ವೇದ ರತ್ನಮಾಲಾ ಸಂಪುಟ ೫ ಪುಟ ೧೩೪–೧೩೭ ಗಳಲ್ಲಿರುವಂತೆ ಇಲ್ಲಿ ಬರೆಯಲಾಗಿದೆ.

ಅವಭೃಥೇಷ್ಟೌ ಹೋತ್ರಕಾ ಜಲಾನ್ನಿಷ್ಕ್ರಮ್ಯ ಉದ್ವಯಂ ತಮಸಸ್ಪರೀತಿ ಮನ್ತ್ರಂ ಬ್ರೂಯುಃ । ತಥಾ ಚ ಪತ್ನೀಸಂಯಾಜ್ಯೈಶ್ಚರಿತ್ವೇತಿ ಖಣ್ಡೇ ಸೂತ್ರಿತಂ। ಉದ್ವಯಂ ತಮ ಸಸ್ಪರೀತ್ಯುದೇತ್ಯ– *ಆ. ೬–೧೩* । ಇತಿ ॥

ವಯಮನುಷ್ಠಾತಾರಸ್ತಮಸಸ್ಪರಿ ತಮಸ ಉಪರಿ ರಾತ್ರೇರೂರ್ಧ್ವಂ ವರ್ತಮಾನಂ ತಮಸಃ ಪಾಪಾತ್ಪರ್ಯುಪರಿ ವರ್ತಮಾನಂ ವಾ । ಪಾಪರಹಿತಮಿತ್ಯರ್ಥಃ । ತಥಾಚಾ ಮ್ನಾಯತೇ । ಉದ್ವಯಂ ತಮಸಸ್ಪರೀತ್ಯಾಹ ಪಾಪ್ಮಾ ವೈ ತಮಃ ಪಾಪ್ಮಾನಮೇವಾ ಸ್ಮಾದಪಹನ್ತಿ / *ತೈ.ಸಂ ೫–೧–೮–೬* ॥ ಇತಿ ಜ್ಯೋತಿ ಸ್ತೇಜಸ್ವಿನಮುತ್ತರಮುದ್ಗತತರ ಮುತ್ಕೃಷ್ಟತರಂ ವಾ ದೇವತ್ರಾ ದೇವೇಷು ಮಧ್ಯೇ ದೇವಂ ದಾನಾದಿಗುಣಯುಕ್ತಂ ಸೂರ್ಯಂ ಪಶ್ಯನ್ತಃ ಸ್ತುತಿಭಿರ್ಹವಿರ್ಭಿಶ್ಚೋಪಾಸೀನಾಃ ಸನ್ತ ಉತ್ತಮಮುತ್ಕೃಷ್ಟತಮಮ್ ಜ್ಯೋತಿಃ ಸೂರ್ಯರೂಪಮಗನ್ಮ । ಪ್ರಾಪ್ನವಾಮ । ತಥಾ ಚ ಶ್ರೂಯತೇ । ಅಗನ್ಮ ಜ್ಯೋತಿರುತ್ತಮಮಿತ್ಯಾಹಾಸೌ ವಾ ಆದಿತ್ಯೋ ಜ್ಯೋತಿರುತ್ತಮಮಾದಿತ್ಯಸ್ಯೈವ ಸಾಯುಜ್ಯಂ ಗಚ್ಛತೀತಿ । ಯುಕ್ತಂಚೈತತ್ । ತಂ ಯಥಾ ಯಥೋಪಾಸತೇ ತದೇವ ಭವನ್ತೀತಿ ಶ್ರುತ್ಯನ್ತರಾತ್ ॥ ತಮಸಸ್ಪರಿ । ಪಂಚಮ್ಯಾಃ ಪರಾವದ್ಯರ್ಥ ಇತಿ ವಿಸರ್ಜನೀ ಯಸ್ಯ ಸತ್ವಂ । ಜ್ಯೋತಿಷ್ಪಶ್ಯಂತಃ। ಇಸುಸೋಃ ಸಾಮರ್ಥ್ಯೇ । ಪಾ ೮–೩–೪೪ ಇತಿ ವಿಸರ್ಜನೀಯಸ್ಯ ಷತ್ವಂ । ವ್ಯಪೇಕ್ಷಾಲಕ್ಷಣಂ ಸಾಮರ್ಥ್ಯಂ ತತ್ರಾಂಗೀ ಕ್ರಿಯತೇ । ದೇವತ್ರಾ । ದೇವಮನುಷ್ಯ ಪುರುಷಪುರುಮರ್ತ್ಯೇಭ್ಯೋ ದ್ವಿತೀಯ ಸಪ್ತಮ್ಯಾರ್ಬಹುಲಂ । ಪಾ ೫–೪–೫೬ । ಇತಿ ಸಪ್ತಮ್ಯರ್ಥೇ ತ್ರಾ ಪ್ರತ್ಯಯಃ । ಪ್ರತ್ಯಯ ಸ್ವರಃ ಅಗನ್ಮ। ಛನ್ದಸಿ ಲುಙ್ ಲಙ್ ಲಿಟ್ ಇತಿ ಪ್ರಾರ್ಥನಾಯಾಂ ಲಙ್ ಬಹುಲಂ ಛನ್ದಸೀತಿ ಶಪೋಲುಕ್ । ಮ್ವೋಶ್ಚ । ಪಾ ೮–೨–೬೫ । ಇತಿ ಧಾತೋರ್ಮಕಾರಸ್ಯ ನಕಾರಃ । ಅಡಾಗಮ ಉದಾತ್ತಃ । ಪಾದಾದಿತ್ವಾನ್ನಿಘಾತಾಭಾವಃ। ಉತ್ತಮಂ । ತಮಪಃ ಪಿತ್ವಾದನು ದಾತ್ತಿತ್ವೇ ಪ್ರಾಪ್ತ ಉತ್ತಮಶಶ್ವತ್ತಮೌ ಸರ್ವತ್ರೇತ್ಯುಂಛಾದಿಷು ಪಾಠಾದಂತೋ ದಾತ್ತತ್ವಂ ॥

**ವಯಂ** ಯಜ್ಞಾನುಷ್ಠಾನನಿರತರಾದ ನಾವು **ತಮಸಸ್ಪರಿ** ಕತ್ತಲಿನಿಂದ ತುಂಬಿದ ರಾತ್ರಿಯಾದನಂತರ ದಯಮಾಡುವವನೂ ಅಥವಾ ಪಾಪರಹಿತನೂ **ಜ್ಯೋತಿಃ** ತೇಜಸ್ವಿಯೂ **ಉತ್ತರಂ** ಉದಯಿಸಿ ಮೇಲಕ್ಕೆ ಬರುವವನೂ ಅತ್ಯಂತ ಶ್ರೇಷ್ಠನೂ **ದೇವತ್ರಾ** ದೇವತೆಗಳ ನಡುವೆ **ದೇವಂ** ದಾನಾದಿಗುಣಗಳಿಂದ ಕೂಡಿದವನೂ ಆದ **ಸೂರ್ಯಮ್** – ಸೂರ್ಯ ದೇವನನ್ನು **ಪಶ್ಯನ್ತಃ** ಸ್ತುತಿಗಳಿಂದಲೂ ಹವಿಸ್ಸುಗಳಿಂದಲೂ ಪೂಜಿಸುತ್ತಾ **ಉತ್ತಮಂ** ಅತ್ಯಂತ ಶ್ರೇಷ್ಠವಾದ **ಜ್ಯೋತಿಃ** ಸೂರ್ಯರೂಪದಲ್ಲಿರುವ ಜ್ಯೋತಿಯನ್ನು **ಅಗನ್ಮ** ಸೇರುವೆವು.

ಕತ್ತಲು ರೂಪವಾದ ರಾತ್ರಿಯು ಕಳೆದ ಮೇಲೆ ಪಾಪರಹಿತನೂ ತೇಜಸ್ವಿಯೂ ಅತ್ಯಂತ ಶ್ರೇಷ್ಠನೂ ಆದ ಸೂರ್ಯನು ಉದಯಿಸಿ ಮೇಲಕ್ಕೆ ಬರುತ್ತಾನೆ. ದೇವತೆಗಳ ನಡುವೆ ದಾನಾದಿಗಳಿಂದ ಕೂಡಿರತಕ್ಕ ಈ ಸೂರ್ಯ ದೇವನನ್ನು ನಾವು ಹವಿಸ್ಸುಗಳನ್ನರ್ಪಿಸುತ್ತಲೂ ಸ್ತುತಿಸುತ್ತಲೂ ಪೂಜಿಸುತ್ತಲೂ ಸೂರ್ಯರೂಪದಲ್ಲಿರುವ ಜ್ಯೋತಿಯನ್ನು ಸೇರುವೆವು. ಅವಭೃಥೇಷ್ಟಿಯಲ್ಲಿ ಹೋತೃ ವರ್ಗದ ಋತ್ವಿಜರು ಸ್ನಾನ ಮಾಡಿ ಹೊರಕ್ಕೆ ಬರುವಾಗ ಈ ತಮಸಸ್ಪರಿ ಮನ್ತ್ರವನ್ನು ಪಠಿಸುವರು.

*ಕಳ್ತಲೆಯ ಕಡಲ ಸೀಳಿ ಪುಣ್ಯಾಂಶು ಕೇಳಿ*
*ಸೂರ್ಯನುದಿಸುವಂ ದೆವಪ್ರಮೋದದಾನಿ ।*
*ಹವಿಯನಿತ್ತು ನಾಮ್ ಸರ್ವ ಸಾಕ್ಷಿಯನೆ ನುತಿಸಿ*
*ಭಜಿಸಿ ಸೇರ್ವುದಾ ಚಿಜ್ಜ್ಯೋತಿಯಪ್ಪ ರವಿಯಂ*

ತತ್ಸವಿತುರ್ವರೇಣಿಯೋೞಮ್ ॥ ಭಾರ್ಗೋೞದೇವಸ್ಯಧೀಮಾಹೀಽ೨ ॥ ಧಿಯೋೞಯೋೞನಃಪ್ರಚೋೞಽ೧೨೧೨ ॥ ಹಿಮ್ ಸ್ಥಿ ಆಽ೨ । ದಾ ಯೋೞ ॥ ಆಽ೩೪೫ ॥ *ದೀ – ೬ / ಪ – ೬ / ಮಾ –೩ / ೨ / ೬ //*

**ಅಥ ಭಾರುಣ್ಡ ಸಾಮ ॥**

೧. ಹಾಉಹಾಉಹಾಉ । ಊಽ೨ವದಃ । ೩ । ವದೋೞವದಃ । ೩ । ವದೋೞನ್ನೃವ್ಣಾನಿಪುರಾಯಃ । ೩ । ಯಮೋೞಹಾಉ । ೩ । ಪಿತರೋೞಹಾಉ । ೩ । ಭಾರುಣ್ಡೋೞಹಾಉ । ೩ । ಇಮಾಜ್ ಸ್ತೋೞಮಾಮ್ । ಅರ್ಹಾತೇೞಜಾ । ತಾವೇೞದಸಹೋೞಯೇೞಽ೩ । ಹೋೞಯೇೞಹೋೞಯೇೞ ॥ ಹಾಉಹಾಉಹಾಉ । ಊಽ೨ವದಃ । ೩ । ವದೋೞವದಃ । ೩ । ವದೋೞನ್ನೃವ್ಣಾನಿಪುರಾಯಃ । ೩ । ಯ

ಮೋ೯ಹಾಉ । ೩ । ಪಿತರೋ೯ಹಾಉ । ೩ । ಭಾರುಣ್ಡೋ೯ಹಾಉ ।
೩ । ರಥಾಮಿವಾ । ಸಮ್ರಾಹೇಮಾ । ಮಾನೀ೯ಷಯಹೋ೯ಯೆ
೯ಽ೩ । ಹೋ೯ಯೇ೯ಹೋ೯ಯೇ೯ ॥ ಹಾಉಹಾಉಹಾಉ । ಊಽ೨
ವದಃ । ೩ । ವದೋ೯ವದಃ । ೩ । ವದೋ೯ನೃಮ್ಣಾನಿಪುರಾಯಃ ।
೩ । ಯಮೋ೯ಹಾಉ । ೩ । ಪಿತರೋ೯ಹಾಉ । ೩ । ಭಾರು
ಣ್ಡೋ೯ಹಾಉ । ೩ । ಭದ್ರಾಹಿನಾಃ । ಪ್ರಮಾತಿರಾ । ಸ್ಯಾಸಜ್ಸ
ದಹೋ೯ಯೇ೯ಽ೩ । ಹೋ೯ಯೇ೯ಹೋ೯ಯೇ೯ ॥ ಹಾಉಹಾಉಹಾಉ ।
ಊಽ೨ವದಃ । ೩ । ವದೋ೯ವದಃ । ೩ । ವದೋ೯ನೃಮ್ಣಾನಿಪುರಾ
ಯಃ । ೩ । ಯಮೋ೯ಹಾಉ । ೩ । ಪಿತರೋ೯ಹಾಉ । ೩ । ಭಾ
ರುಣ್ಡೋ೯ಹಾಉ । ೩ । ಅಗ್ನಾ೯ಇಸಖ್ಯಾ೯ಇ । ಮಾರಾ೯ಇಷಾಮಾ ।
ವಾಯನ್ತವಹೋ೯ಯೇ೯ಽ೩ । ಹೋ೯ಯೇ೯ಹೋ೯ಯೇ೯ ॥ ಹಾಉಹಾ
ಉಹಾಉ । ಊಽ೨ವದಃ । ೩ । ವದೋ೯ವದಃ । ೩ । ವದೋ೯ನೃ
ಮ್ಣಾನಿಪುರಾಯಃ । ೩ । ಯಮೋ೯ಹಾಉ । ೩ । ಪಿತರೋ೯ಹಾ
ಉ । ೩ । ಭಾರುಣ್ಡೋ೯ಹಾಉ । ೨ । ಭಾರುಣ್ಡೋ೯ಽ೩ಹಾಉ ।
ವಾ ॥ ಏ । ವದೋ೯ವದೋ೯ವದೋ೯ನೃಮ್ಣಾನಿಪುರಾಯಯಮೋ೯
ವಃಪಿತರೋ೯ಭಾರುಣ್ಡಃ । ೨–೨ । ಏ । ವದೋ೯ವದೋ೯ವದೋ೯ನೃ

೧೦ ೦ ೨ ೧ ೦ ೨ ೧ ೨೦ ೦ ೩ ೧೧೧
**ವ್ಣಾನಿಪುರಾಯಯಮೋಽವ೮\ಪಿತರೋಽಭಾರುಣ್ಡಾಽ೨೩೪೫ಃ ।**

*ದೀ - ೧೫೪ / ಪ - ೧೧೮ / ಮಾ - ೧೧೩ / ದಿ / ೭ ॥*

ಗ್ರನ್ಥೋಽಯಮೇಕಸಾಮಾತ್ಮಕಃ ಗೇಯಾದಿಗಾನಗ್ರನ್ಥಾತ್ ಪೃಥಗ್ಭೂತಃ ಛನ್ದಾರ್ಚಿಕ ಮೂಲಕತ್ವಾತ್ ಛನ್ದಾರ್ಚಿಕ - ಪರಿಶಿಷ್ಟತ್ವೇನೈವ ವ್ಯವಹ್ರಿಯತೇಽಸ್ಮಾಭಿಃ । ಕಿಂಚ ಛನ್ದ ಆರ್ಚಿಕ - ಪರಿಶಿಷ್ಟ - ರೂಪಸ್ಯಾರಣ್ಯಗಾನಸ್ಯೇವಾದ್ಯನ್ತಸ್ತೋಭ - ಯುಕ್ತತ್ವಾತ್ತದೀಯತ್ವಮಪೀತಿ ದ್ವಿತೀಯತ್ವೇನಾಪೀತಿ ॥ ಪಿತೃಯಜ್ಞದಾವಸ್ಯ ವ್ಯವಹಾರೋ ದೃಶ್ಯತೇಽತೋಽಸೌ ಪಿತೃಸಾಮೇತ್ಯಪಿ ಪಿತೃಪದಘಟಿತತ್ವಾಞ್ಚಾತ್ರ ಬೀಜಮ್ ॥ ಸಾಮಶ್ರಮಿ - ಛನ್ದಾರ್ಚಿಕ ದ್ವಿತೀಯ ಪರಿಶಿಷ್ಟಮ್ ॥

ಈ ಸಾಮಗಾನವು ಇಮ೮\ ಸ್ತೋಮಮರ್ಹತೇ - ಸಂ. ೧ ಋಕ್ ೬೬ ಪು ೪೪೫ - ೪೪೮ ಮತ್ತು ೧೦೬೪ ನೆಯ ಋಕ್ ಭರಾಮೇಧ್ಮಂಕೃಣವಾಮಾ - ೧೦೬೫ ಋಕ್ ಮತ್ತು ಶಕೇಮತ್ವಾಸಮಿಧ೮\ - ೧೦೬೬ ಋಕ್‌ಗಳ ಮೇಲೆ ಅಧಿಷ್ಠಿತವಾಗಿದ್ದು ಇದರ ಭಾಷ್ಯವನ್ನು ಆಯಾ ಋಕ್‌ಗಳ ಅಡಿಯಲ್ಲಿ ನೋಡಬಹುದು.

ಈ ಸಾಮಗಳನ್ನು ಭಾರಣ್ಡ ಸಾಮವೆಂದು ಸಾಮಶ್ರಮಿಗಳೂ ಭಾರುಣ್ಡ ಸಾಮವೆಂದು ರಾಮನಾಥದೀಕ್ಷಿತರೂ ಮತ್ತು ಸಾತವಲೇಕರರು ಭಾರೂಣ್ಡ ಸಾಮವೆಂದು ಪಂಕಜಶರ್ಮರೂ ಹೆಸರಿಸಿದ್ದಾರೆ. ಭರಣ್ಡ - ಪು.ಸ್ವಾಮಿ ಯಜಮಾನ. ಭೃಞ - ಭರಣೀ - ಅಣ್ಡಚ - ಉ ೧-೧೨೬ ॥ ರಾಜ ದೊರೆ ವೃಷಭಂ ಭರಣ್ಡ ಋಷಿಗಳು ದ್ರಷ್ಟಾರರಾಗಿರುವ ಸಾಮಗಾನ ಭಾರುಣ್ಡ ಸಾಮ. ದೂರದ ದ್ಯುಲೋಕದಲ್ಲಿ ಆದಿತ್ಯನಾಗಿ ಬೆಳಗುತ್ತಲಿದ್ದೂ ನಮ್ಮನ್ನು ಅನುಗ್ರಹಿಸಲೆಂದೇ ನಮ್ಮ ಕಲ್ಯಾಣಕ್ಕಾಗಿ ಈ ಭೂಲೋಕದಲ್ಲಿ ನಮ್ಮ ಸನಿಹದಲ್ಲೇ ಅವತರಿಸಿರುವ ಅಗ್ನಿ ಭಗವಂತನೇ ಜಗತ್ತಿನ ನಿಯಾಮಕನೇ ನಮ್ಮ ಭರಣ ಪೋಷಣದಲ್ಲೇ ಸದಾಕಾಲ ನಿರತನಾಗಿರುವ ಒಡೆಯನೇ ಯಜಮಾನನೇ ತಂದೆ ತಾಯಿಯರಂತೆ ವಾತ್ಸಲ್ಯ ಮಯನೇ ನಾವು ಅರ್ಪಿಸುವ ಹವಿಸ್ಸಷ್ಟರಲ್ಲೇ ತೃಪ್ತನಾಗಿರುವವನೇ ಪವಿತ್ರ ಮಾತುಗಳ ವಕ್ತೃವೇ ನಮಗೆ ಹಿತವಾವುದೆಂದು ಉಪದೇಶಿಸು. ನಮ್ಮ ಗುರಿಯನ್ನು ಮುಟ್ಟಲು ಅನುಕೂಲವಾಗುವಂತಹ ರಥಾದಿ ವಾಹನದಿ ಸೌಕರ್ಯಗಳನ್ನು ನಿರ್ಮಿಸಿಕೊಳ್ಳುವ ಪರಿಯಲ್ಲೇ ಪರಮ ಗೌರವಾನ್ವಿತನೂ ಜಾತ ಪ್ರಜ್ಞನೂ ವಿದ್ಯಾಧನಭರಿತನೂ ಜ್ಯೋತಿ ಸ್ವರೂಪನೂ ಪೂಜ್ಯನೂ ಮಹಾಮಹಿಮನೂ ಆದ ನಿನ್ನ ದಿವ್ಯ ಗುಣಗಳ ವರ್ಣನೆಯಿಂದ ತುಂಬಿ ತುಳುಕುವ ಸ್ತೋತ್ರರೂಪೀ ದಿವ್ಯವಾದ ಸಾಮಗಳನ್ನು ಶ್ರದ್ಧೆಯಿಂದ ಪ್ರಜ್ಞಾಪೂರ್ವಕ ಶುದ್ಧಬುದ್ಧಿಯಿಂದ ವ್ಯಷ್ಟಿಯಾಗಿ ಮನೆ ಮನೆಗಳಲ್ಲೂ ಸಮಷ್ಟಿಯಾಗಿ ಯಜ್ಞಶಾಲೆಗಳಲ್ಲೂ ನಿನ್ನ ಮನ ಮುಟ್ಟುವಂತೆ ಗಾನ ಮಾಡಲು ಅನುವು ಮಾಡಿಕೊಡು ಪ್ರೇರೇಪಿಸು. ಶುದ್ಧವಾದ ಚುರುಕಾದ ಸೂಕ್ಷ್ಮವಾದ ಮನೋ ಬುದ್ಧಿಗಳನ್ನು ರೂಪಿಸು.

ಜ್ಯೋತಿಸ್ವರೂಪನಾದ ನಿನ್ನ ಸ್ನೇಹಕ್ಕೆ ಒಳಪಟ್ಟಿರುವ ನಾವು ಎಂದೂ ಯಾವಾಗಲೂ ಯಾರಿಂದಲೂ ಹಿಂಸೆಗೊಳಗಾಗದಂತೆ ಅನುಗ್ರಹಿಸು.

*ದೂರದಾ ದಿವಿಯಲ್ಲಿ ಭಾಸ್ಕರನಾಗಿ ಬೆಳಗುತ ಹರಸುವ,*
*ಈ ರಸೆಯೊಳೇ ಸನಿಹದೊಳ್ ಶಿಖಿಯಾಗಿ ತೊಳಗುತ ಬೆಳೆಸುವ*
*ಪಾಲಿಸುವ ತಾಯ್ತಂದೆಗಳವೋಲ್ ವತ್ಸಲಿನೆ ನಮ್ಮೆಲ್ಲರುಂ*
*ಲೀಲೆಯಿಂ ಕನಿಕರಿಸುವುದಮ್ ನುಡಿನೀತಿಯೆಲ್ಲವ ತಿಳಿಪುದಮ್*

*ಗಮ್ಯದನುಸಾರಂ ಸುನಿರ್ಮಿತಮಪ್ಪ ರಥದ ವಿಧಾನದಿಂ*
*ರಮ್ಯ ಭೂಮವಿಶೇಷತತ್ವ ! ನಿರೂಪಿತಮಿದೀ ಸಾಮಮಮ್*
*ಇದನೆ ಪಾಡಲಿಕೆಲ್ಲೆಡೆಯೊಳೀಯುವುದು ಕಾಲವಿಶೇಷಮಮ್*
*ಪದುಳದಿಂ ರೂಪಿಸುವುದಂ ತಕ್ಕಂಥ ಸಾಧನಸತ್ತ್ವಮಮ್ ॥*

ಇತಿ ಆರಣ್ಯಕಗಾನೇ ಭಾರುಣ್ಡೇನ ಸಹ ಮಹಾನಾಮ್ನೀತಿ
ಸಪ್ತಮಂಗಾನಂ ಸಮಾಪ್ತಮ್

## ಆರಣ್ಯಕ

ಸಪ್ತಗಾನಾತ್ಮಕವಾದ ಸಾಮಗಾನಾರಣ್ಯಕ ಸಂಹಿತೆಯಲ್ಲಿ ಮೊದಲನೆಯದಾದ ಗಾಯತ್ರ ಗಾನ ಎರಡನೆಯದಾದ ಆಗ್ನೇಯಗಾನ ಮೂರನೆಯದಾದ ಐನ್ದ್ರಗಾನ ನಾಲ್ಕನೆಯದಾದ ಪಾವಮಾನಗಾನಾನಂತರ ಬಂದಿರುವ **ಆರಣ್ಯಗಾನವು** ಐದನೆಯ ದಾಗಿದೆ. ಒಟ್ಟು ೨೯೬ ಗಾನಗಳಿಂದ ಕೂಡಿರುವ ಈ ಭಾಗವು ೭೭ ಗಾನಗಳಿಂದೊ ಡಗೂಡಿದ **ದ್ವನ್ದ್ವ** ಪರ್ವವೆಂದೂ ೮೯ ಗಾನಗಳಿಂದೊಡಗೂಡಿದ **ಅರ್ಕ** ಪರ್ವವೆಂದೂ ೮೪ ಗಾನಗಳಿಂದೊಡಗೂಡಿದ **ವ್ರತ** ಪರ್ವವೆಂದೂ ೪೦ ಗಾನಗಳಿಂದೊಡಗೂಡಿದ **ಶುಕ್ರಿಯ** ಪರ್ವವೆಂದೂ ೪ ಗಾನಗಳಿಂದೊಡಗೂಡಿದ **ಮಹಾನಾಮ್ನಿ** ಪರ್ವವೆಂದೂ ೨ ಗಾನಗಳಿಂದೊಡಗೂಡಿದ **ಅರಣ್ಯ ಪರಿಶಿಷ್ಟವೆಂದೂ** ವಿಭಕ್ತವಾಗಿ ಆರು ಪ್ರಪಾಠಕಗಳಲ್ಲಿ ಅಡಕವಾಗಿದೆ. ಛನ್ದಾರ್ಚಿಕದ ಆರನೆಯ ಅಧ್ಯಾಯದಲ್ಲಿ ಪಠಿತವಾಗಿರುವ ೫೮೬– ೬೫೦ವರೆಗಿನ ೬೫ ಋಕ್‌ಗಳಿಂದುದಯವಾಗಿರುವ ಸಾಮಗಾನಗಳೂ ಆಗ್ನೇಯ ಐನ್ದ್ರ ಪಾವಮಾನ ಕಾಂಡಗಳಲ್ಲಿ ಪಠಿತವಾಗಿರುವ ಯೋನಿಋಕ್‌ಗಳಿಂದುದಯವಾಗಿರುವ ೭೬ ಸಾಮಗಾನಗಳೂ ಪದ/ವಾಕ್ಯ ಸ್ತೋಭಗಳಿಂದ ಉದಯವಾಗಿರುವ ಋಕ್‌ರಹಿತಸಾಮ/ ಅನರ್ಚಸಾಮ/ ಸ್ತೌಭಿಕ ಸಾಮಗಳೆನಿಸಿಕೊಂಡಿರುವ ೨೨ ಸಾಮಗಾನಗಳೂ ಈ ಭಾಗದ ೨೯೬ ಸಾಮ ಗಾನಗಳಲ್ಲೇ ಸಮಾವೇಶವಾಗಿವೆ. ಗ್ರಾಮಗೇಯಗಾನ ಅರಣ್ಯಗೇಯ ಗಾನಗಳೆರಡನ್ನೂ ಒಟ್ಟಾಗಿ ಪ್ರಕೃತಿಗಾನವೆಂದೂ ವೇಯಗಾನವೆಂದೂ ಯೋನಿಗಾನ ವೆಂದೂ ಗ್ರಾಮಗೇಯಗಾನವನ್ನು ವೇದಸಾಮವೆಂದೂ ಅರಣ್ಯಗೇಯಗಾನವನ್ನು ಛನ್ದ ಸ್ಸಾಮವೆಂದೂ ವ್ಯವಹರಿಸಲಾಗಿದೆ. **ಅರ್ಕ ದ್ವನ್ದ್ವವ್ರತಾನಿ ಛನ್ದಸಾನಿ** ಎಂದೂ ಆರಣ್ಯ

ಗಾನದ ಅಂಗಭೂತವಾದ ಅರ್ಕದ್ವನ್ದ್ವವ್ರತ ಪರ್ವಗಳನ್ನು ಛಾನ್ದಸವೆಂದೂ ಖಾ.ಗೃ.ಸೂ ೨.೫.೩೪ ರಲ್ಲಿ ಉಲ್ಲೇಖಿಸಲಾಗಿದೆ. **ಛಾನ್ದಸೀಷು ಸೀಮಾಸು** ಎಂದೂ ಆರಣ್ಯಗಾನಕ್ಕೆ **ಛಾನ್ದಸವೆಂದೂ** ಪು.ಸೂ. ೪–೧೭ ಬಳಸಿದೆ. ಸಾಮಯೋನಿ ಋಕ್‌ಗಳಿಗೆ **ಛಾನ್ದಸ್ಯವೆಂದೂ** ಇವುಗಳಿಂದ ಉದಯವಾಗಿರುವ ಸಾಮಗಾನಗಳಿಗೆ ಛಾನ್ದಸ ಎಂದೂ ಸಾಯಣಾದಿ ಪ್ರಭೃತಿಗಳು ವ್ಯವಹರಿಸಿದ್ದಾರೆ. ಆರಣ್ಯಗಾನದ ಲಯವನ್ನು ಊಹ್ಯ/ ರಹಸ್ಯಗಾನಗಳು ಅನುಸರಿಸುತ್ತಿವೆ.

**ಅರಣ್ಯ** – ವನ ಕಾಡು ಸಂನ್ಯಾಸಿಗಳ ಒಂದು ಭೇದ. **ಆರಣ್ಯಕ** – ಅರಣ್ಯವಾಸಿ ಬ್ರಾಹ್ಮಣಕ್ಕೆ ಸೇರಿದ ವೇದದ ಭಾಗ. ವಾನಪ್ರಸ್ಥರಿಗೆ ಉಪದೇಶಿಸುವ ವೇದಭಾಗ. ಆರಣ್ಯಾನ್ ಅರಣ್ಯವಾಸಿಗಳಾದ ಮೃಗಗಳನ್ನು **ಅರಣ್ಯಾ** – ಅರಣ್ಯ ಪಾಲಕಳಾದ ಅರಣ್ಯಾಭಿಮಾನೀ ದೇವತೆ. **ಆರಣ** – ಆನಂದಪ್ರದ ಅವಸರ. ಯೋಗಾಧೇಷು ಯ ಆರಣೇಷು ಹವ್ಯಃ । ಋ.ಸಂ ೮–೭೦–೮ **ಅರಣ್ಯಾನ್ಮನುಷ್ಯೇ** – ಪಥ್ಯಧ್ಯಾಯ ನ್ಯಾಯವಿಹಾರ. ಮನುಷ್ಯ ಹಸ್ತಿಷ್ವಿತಿ ವಕ್ತವ್ಯಮ್ । ಅರಣ್ಯೇಧೀಯತೇ ಆರಣ್ಯಕೋಧ್ಯಾಯ ಇತಿ । ೪–೨–೧೨೯ ॥ ಅಷ್ಟಾಧ್ಯಾಯೀ ॥ ಅರಣ್ಯೇ – ರಹಸ್ಯೇ ಏಕಾಂತೇ – ಅಧೀಯಮಾನತ್ವಾತ್ ಗೇಯತ್ವಾಚ್ಚ ಏತೇಷಾಂ ಸಾಮ್ನಾಂ ಆರಣ್ಯತ್ವೇನ ರಹಸ್ಯತ್ವೇನ ಚ ಪ್ರಸಿದ್ಧಿಃ । ಸಾತವೇಲಕರ್ ॥ ಅರಣ್ಯಾಧ್ಯಯನಾದೇತದಾರಣ್ಯ ಕಮಿತೀರ್ಯತೇ । ಅರಣ್ಯೇತದಧೀಯೀತೇತ್ಯೇವಂವಾಕ್ಯ ಪ್ರವಕ್ಷತೇ ॥ ತೈ. ಆ ೧–೧ ಪ್ರಾಕ್ಕಥನ ಶ್ಲೋಕ ೬ ॥ ಅರಣ್ಯಾಧ್ಯಾಯ ಯೋಗ್ಯತ್ವಾ ದಪ್ಯಾರಣ್ಯಕಮಿಷ್ಯತೇ ॥ ಸಾ. ಭಾ ॥ ಅರಣ್ಯೇ ಅನೂಚ್ಯಮಾನತ್ವಾತ್ ಆರಣ್ಯಕಮ್ । ಬೃ.ಉ ಅವತರಣಿಕೆ ಶಂಭಾ ॥

ಲೌಕಿಕಾಕರ್ಷಣೆ ಹಾಗೂ ಸಾಂಸಾರಿಕ ಕಷ್ಟಕಾರ್ಪಣ್ಯಗಳಿಂದ ಜೀವನ ಸಂಘ ರ್ಷಗಳಿಂದ ನಿರ್ಲಿಪ್ತನಾಗಿ ಜನಸಂದಣಿಯಿಂದ ದೂರವಾದ ನದಿ ಪರ್ವತ ಅರಣ್ಯ ಗಳಂತಹ ಪ್ರಕೃತಿರಮ್ಯವಾದ ತಪಸ್ಸಿಗೆ ಭಂಗ ಬರದ ಭಯರಹಿತವಾದ ಏಕಾಂತ ಸ್ಥಳ ದಲ್ಲಿ – ಏಕಸ್ತಪೋ ದ್ವಿರಧ್ಯಾಯೀ ಎಂಬ ನುಡಿಕಟ್ಟಿನಂತೆ ಏಕಾಕಿಯಾಗಿ ಆರಣ್ಯಕ ಮನ್ತ್ರಗಳನ್ನು ಅರ್ಥಸಹಿತವಾಗಿ ಆಯಾ ಸಾಮಗಾನಗಳಲ್ಲಿ ಅನುಸಂಧಾನ ಮಾಡುತ್ತಾ ಸಾಮಗಾನದ ನಾದದಲ್ಲಿ ಲೀನವಾಗಿ ಆನಂದಾನುಭವವನ್ನೂ – ಬ್ರಹ್ಮಾನುಭವವನ್ನೂ ಪಡೆಯಲು ಸಾಧನವಾದ ವಿಶೇಷವಾದ ವಿದ್ಯೆ ಉಪಾಸನೆ ಮತ್ತು ಜ್ಞಾನದ ರಹಸ್ಯವಾದ ವೇದ ಮನ್ತ್ರಗಳ ಸಾಮಗಾನಗಳ ಸಂಗ್ರಹವೇ – ಆರಣ್ಯಕ. ರಹಸ್ಯವಿರುವುದು ವೇದ ಮನ್ತ್ರಗಳಿಗಿಂತ ಸಾಮಗಾನದ ವೈಭವವನ್ನು ತಲ್ಲೀನರಾಗಿ ಅನುಭವಿಸುವುದರಲ್ಲಿಯೇ ಎಂಬುದನ್ನು ಮನಗಾಣಬೇಕು. ಇದನ್ನೇ ನವನೀತಂ ಯಥಾ ದಧ್ನೋ ಮಲಯಾಚ್ಚಂ ದನಂ ಯಥಾ । ಅರಣ್ಯಕಂ ಚ ವೇದೇಭ್ಯ ಓಷಧಿಭ್ಯೋಽಮೃತಂ ಯಥಾ ಮ.ಭಾ. ಶಾಂ.ಪ ೩೩೧ – ೩ । ಮೊಸರಿನಿಂದ ಬೆಣ್ಣೆಯನ್ನೂ ಮಲಯ ಪರ್ವತದಿಂದ ಚಂದನವನ್ನೂ ಓಷಧಿಗಳಿಂದ ಅಮೃತವನ್ನೂ ಪಡೆಯುವಂತೆ ವೇದದ ಹೃದಯ ಭಾಗವಾದ ಆರಣ್ಯಕ ಮನ್ತ್ರಗಳನ್ನು ಅರ್ಥಸಹಿತವಾಗಿ ಪರಿಭಾವಿಸುತ್ತಾ ಸಾಮಗಾನಾನುಸಂಧಾನದಲ್ಲಿ ಹೃದ್ಗತ ಭಗವಂತ ನನ್ನರಿಯಬೇಕೆಂದು ತಿಳಿಸುತ್ತಿದೆ.

ವೇದದ ಕರ್ಮಕಾಂಡಕ್ಕೂ - ಬ್ರಾಹ್ಮಣಗಳಿಗೂ ವೇದದ ಜ್ಞಾನಭಾಗಕ್ಕೂ - ಉಪನಿಷತ್ತುಗಳಿಗೂ ಸೇತುವೆಯಂತಿರುವುದೇ ಈ ಆರಣ್ಯಕಗಳಾಗಿರುವುದರಿಂದ ಇವುಗಳಿಗೆ ***ಆರಣ್ಯಕೋಪನಿಷತ್*** ಎಂದೂ ಒಂದಾಗಿ ಸೇರಿಸಿ ಹೆಸರಿಸಲಾಗಿದೆ.

...ಯದರಣ್ಯಾಯನಮಿತ್ಯಾಚಕ್ಷತೇ ಬ್ರಹ್ಮಚರ್ಯಮೇವ ತತ್ ತದರಶ್ಚ ಹ ವೈ ಣ್ಯಶ್ಚಾರ್ಣವೌ ಬ್ರಹ್ಮಲೋಕೇ ... ॥ ಛಾಂ.ಉ.೮-೫-೩ ॥ ಯಾವುದನ್ನು ಅರಣ್ಯಾವಾಸ ಎಂದು ಹೇಳುವರೋ ಅದು ಬ್ರಹ್ಮಚರ್ಯವೇ. ಏಕೆಂದರೆ ಯಾವುದನ್ನು ಬ್ರಹ್ಮಚರ್ಯದಿಂದ ಪಡೆದುಕೊಳ್ಳುವರೋ ಆ ಆತ್ಮನು ನಾಶವಾಗುವುದಿಲ್ಲ. ತದ್ಯ ಏವೈತಾವರಂ ಚ ಣ್ಯಂ ಚಾರ್ಣವೌ ಬ್ರಹ್ಮಲೋಕೇ ಬ್ರಹ್ಮಚರ್ಯಣಾನುವಿಂದಂತಿ ತೇಷಾಮೇವೈಷ ಬ್ರಹ್ಮ ಲೋಕಃ...॥ ಛಾಂ.ಉ.೮-೫-೪ ॥ ಯಾರು ಆ ಬ್ರಹ್ಮ ಲೋಕದಲ್ಲಿರುವ ಅರ ಮತ್ತು ಣ್ಯ ಎಂಬ ಅರ್ಣವಗಳನ್ನು ಬ್ರಹ್ಮಚರ್ಯದಿಂದ ಹೊಂದುವರೋ ಅವರಿಗೆ ಈ ಬ್ರಹ್ಮಲೋಕವು. ಅವರಿಗೆ ಸಮಸ್ತ ಲೋಕಗಳಲ್ಲೂ ಗತಿಯಿರುವುದು. ಅರಣರು - ನಿವೃತ್ತಿ ಧರ್ಮದಲ್ಲಿರುವ ನೈಷ್ಠಿಕ ಬ್ರಹ್ಮಚಾರಿಗಳು ಸಂನ್ಯಾಸಿಗಳು ಅಧ್ಯಯನಮಾಡಲೂ ಅನುಷ್ಠಾನಗೊಳಿಸಲೂ ಸಾಧಿಸಲೂ ಬಹು ಆಲಂಬನ ಯೋಗ್ಯವಾದ ಪವಿತ್ರವಾದ ರಹಸ್ಯವಾದ ಮನ್ತ್ರ/ಗಾನ ಭಾಗವೇ ಆರಣ್ಯಕವಾಗಿದೆ. ಇದು ಜ್ಞಾನಕ್ಕೆ ಉತ್ಕೃಷ್ಟವಾದ ಸಹಕಾರಿ ಸಾಧನವಾಗಿರುತ್ತದೆ.

ಈ ಭಾಗದ ೨೯೬ ಸಾಮಗಾನಗಳಲ್ಲಿನ ಆಯ್ದ ೧೮೪ ಸಾಮಗಾನಗಳು ನಿತ್ಯಾಹ್ನಿಕ ದೇವತಾರ್ಚನೆ ದೇವತಾಪ್ರತಿಷ್ಠಾಪನೆ ಆದಿ ಕೈಂಕರ್ಯಗಳಲ್ಲೂ ರಾಮ ಪಟ್ಟಾಭಿಷೇಕ ಸೂರ್ಯನಮಸ್ಕಾರಾದಿ ವ್ರತಾನುಷ್ಠಾನುಗಳಲ್ಲೂ ಷೋಡಶಕರ್ಮಗಳಲ್ಲೂ ವಿನಿಯೋಗವಾಗಿರುವುದನ್ನು ನೋಡಿದರೆ ಕಾಡಿನಲ್ಲಿ ರಹಸ್ಯವಾಗಿ ಏಕಾಂತದಲ್ಲಿ ಅಧ್ಯಯನ ಮಾಡುವಷ್ಟುರಮಟ್ಟಕ್ಕೇ ಸೀಮಿತವಾಗದೆ ಗ್ರಾಮಗ್ರಾಮಗಳಲ್ಲಿ ದೇವಸ್ಥಾನ ಪವಿತ್ರ ತೀರ್ಥಕ್ಷೇತ್ರಗಳಲ್ಲಿ ಮನೆಮನೆಗಳಲ್ಲಿ ಮಾಡುವ ಅಧ್ಯಯನ ಅಧ್ಯಾಪನೆಗಳಲ್ಲೂ ನಿಯೋಜಿತವಾಗಿ ದುಃಖ ಕಷ್ಟಕಾರ್ಪಣ್ಯಾದಿ ಸಾಂಸಾರಿಕ ತಾಪತ್ರಯಗಳನ್ನು ನಿವೃತ್ತಿ ಮಾಡಿಕೊಳ್ಳುವ ಸಾಧನವಾಗಿಯೂ ಲೌಕಿಕವಾದ ಇಷ್ಟಾರ್ಥಗಳನ್ನೂ ಕಾಮೋಪ ಭೋಗಗಳನ್ನೂ ಶ್ರೇಯೋ ಭ್ಯುದಯಗಳನ್ನೂ ಪಡೆಯುವ ಬಗೆಬಗೆಯ ಕರ್ಮಾನುಷ್ಠಾನಗಳಲ್ಲೂ ಈ ಆರಣ್ಯಕ ಮನ್ತ್ರಗಳೂ ಸಾಮಗಾನಗಳೂ ವಿನಿಯೋಗವಾಗಿವೆ.

ವೇದವಾಙ್ಮಯಕ್ಕೇ ಕಿರೀಟಪ್ರಾಯವಾಗಿರುವ ಸಾಮವೇದಕ್ಕೇ ವಿಶಿಷ್ಟವಾದ ಅವ್ಯಕ್ತಾರ್ಥವುಳ್ಳ ಮಹಿಮಾನ್ವಿತವಾದ ೨೨ ಸ್ತೌಭಿಕ ಸಾಮಗಾನಗಳು ಈ ಭಾಗದಲ್ಲೇ ಇದ್ದು ಆರಣ್ಯಕದ ಶ್ರೇಷ್ಠತೆಗೆ ಕಾರಣವಾಗಿವೆ. ಸ್ಕಾಂದಪುರಾಣೋಕ್ತ **ಜ್ಯೇಷ್ಠಸಾಮ** ರಹಸ್ಯಾಯ ಶತರುದ್ರ ಪ್ರಿಯಾಯಚ । ಪ್ರಭಾಸಖಂಡ ೧೩-೪೨ ॥ ಜ್ಯೇಷ್ಠಸಾಮ ಅರ ೪೩ ವಿಷ್ಣು ಸಹಸ್ರನಾಮೋಕ್ತ ಸಾಮ ೭೫. **ತ್ರಿಸಾಮಾ** ಸಾಮಗಃ ಸಾಮ - ದೇವವ್ರತ ಸಮಾ ಖ್ಯಾತೈಸ್ತ್ರಿಭಿಃ ಸಾಮಭಿಃ ಸಾಮಗೈಃ ಇತಿ ತ್ರಿಸಾಮಾ ಅರ ೨೧೨ ೨೧೩ ೨೧೪.

ಈ ಮೂರು ದೇವವ್ರತಸಾಮಗಳೂ **ಬೃಹದ್ರಥಂತರೇ ಚ ಮೇ** ಎಂದು ಚಮಕಾಧ್ಯಾಯದಲ್ಲಿ ಪಠಿತವಾಗಿರುವ ಅರ ೨೭ ಮತ್ತು ೬೬ ಸಾಮಗಾನಗಳೂ ಬೃಹತ್ಸಾಮ ತಥಾಸಾಮ್ನಾಂ । ಬೃಹತ್ಸಾಮೇತಿತ್ವಾಮಿದ್ಧಿ ಹವಾಮಹೇ ಅರ ೨೭ । **ಬೃಹತ್ಸಾಮ ತಥಾಸಾಮ್ನಾಂ** ಪ್ರಧಾನ ಮಸ್ಮಿ । ಭ.ಗೀ ೧೦-೩೫ ॥ ಸಾಮಗಾನಗಳಲ್ಲಿ ಪ್ರಧಾನವಾಗಿರುವ ಬೃಹತ್ಸಾಮವೇ ನಾನು ಎಂದಿರುವ ಭಗವಂತನ ಸಾನ್ನಿಧ್ಯವೇ ಭಗವಂತನೇ ಆಗಿರುವ ಬೃಹತ್ಸಾಮವೂ ಈ ಆರಣ್ಯಕದ ಭಾಗವೇ ಆಗಿದ್ದು ಆರಣ್ಯಕಗಾನಗಳು ದೈವಿಕತೆಯ ಪ್ರಕಾಶದಿಂದ ದೇದೀಪ್ಯಮಾನವಾಗಿ ಕಂಗೊಳಿಸುತ್ತಿವೆ.

ಆರಣ್ಯೇಗೇಯಗಾನದ ೧-೮೯ ಸಾಮಗಾನಗಳ ಸಮೂಹವು ಅರ್ಕಪರ್ವ ವೆನಿಸಿಕೊಂಡಿದೆ. ಮನ್ತ್ರರೂಪವಾದ ಅರ್ಕದಿಂದ ಅಗ್ನಿಪರವಾದ ಗಾಯತ್ರ ರಥಂತರ ಬೃಹತ್ ಎಂಬ ಮೂರು ಬಗೆಯ ಸಾಮಗಾನಗಳು ಉದಯವಾದವು. ಅಗ್ನಿಪರವಾದ ಗಾಯತ್ರದಿಂದ ಅರ್ಕವೂ ಅರ್ಕದಿಂದ ಗಾಯತ್ರಸಾಮವೂ ಉದಯವಾಯಿತು. ಯಜ್ಞಕರ್ತೃವಾದ ಯಜಮಾನನು ಪ್ರಾರಂಭದಲ್ಲೇ ಗಾಯತ್ರ ಗಾನಮಾಡುವುದು ಗಾಯತ್ರ ಛಂದಸ್ಸೇ ಅಗ್ನಿಯಾದುದರಿಂದ ಅಗ್ನಿಯೇ ಯಜಮಾನನಿಗೆ ಶಿರೋರೂಪ ಶ.ಬ್ರಾ ೯-೧, ೨-೩೫ ಅರ್ಕ ಸೂರ್ಯ ಅರ್ಚ್ಯತೇ-ಅರ್ಚಪೂಜಾಯಾಮ್ ॥ ಪೂಜಾ ಯೋಗ್ಯವಾದ ಈ ಅರ್ಥದ ಪ್ರಾಧಾನ್ಯತೆಯಿಂದಾಗಿ - ಇಲ್ಲಿನ ೭೪ ಸಾಮಗಾನಗಳಲ್ಲಿ ಅರ್ಕಪದವಿಲ್ಲದಿದ್ದರೂ ೧೫ ಸಾಮಗಾನಗಳು ಮಾತ್ರ ಅರ್ಕಪದಯುಕ್ತವಾಗಿರುವು ದರಿಂದಲೇ ಈ ಸಾಮಗಾನ ಸಮೂಹಕ್ಕೆ **ಅರ್ಕಪರ್ವ**ವೆಂಬ ಅಭಿಧಾನವಿದೆ. ಆರಣ್ಯಗೇಯಗಾನದ ೯೦ ರಿಂದ ೧೬೬ ಪೂರ್ತ ೭೭ ಗಾನಗಳಲ್ಲಿ ೫೮ ಸಾಮಗಾನಗಳು ಪ್ರಾಣಾಪಾನೌದ್ವೌ ಪ್ರಜಾಪತೇರ್ವ್ರತಪಕ್ಷೌದ್ವೌ ಇತ್ಯಾದಿ ಯುಗಲ ನಾಮರೂಪಗಳಲ್ಲಿ ಜೊತೆ ಜೊತೆಯಾಗಿ ಜೋಡಿಯಾಗಿ ದ್ವಿವಚನದಲ್ಲಿ ವ್ಯವಹೃತವಾಗಿರುವುದರಿಂದ ಈ ಭಾಗ **ದ್ವಂದ್ವಪರ್ವ**ವೆನಿಕೊಂಡಿದೆ. ಇದಕ್ಕೆ ಅಪ ವಾದವಾಗಿ ೧೯ ಸಾಮಗಾನಗಳಲ್ಲಿ ಕೆಲವೆಡೆ ಒಂದು ಋಕ್‌ಗೆ ಒಂದೇ ಸಾಮಗಾನವೂ ಕೆಲವೆಡೆ ಮೂರು ಸಾಮಗಾನವೂ ಕೆಲವೆಡೆ ಆರು ಸಾಮಗಾನಗಳೂ ಉದಯವಾಗಿರುವುದು ಕಂಡುಬರುತ್ತದೆ. ವಾಚೋವ್ರತೇ ಸೋಮ ವ್ರತಮ್ ಇತ್ಯಾದಿ ವ್ರತಾಭಿಧಾನಗಳಿಂದ ೧೬೭-೨೫೦ ರ ಪೂರ್ತ ೮೪ ಸಾಮಗಾನಗಳನ್ನು ಗುರುತಿಸಿರುವ ಈ ಭಾಗವು **ವ್ರತಪರ್ವ** ವೆಂಬ ಹೆಸರಿನಿಂದ ವ್ಯವಹೃತವಾಗಿದೆ. ಅಪವಾದ ರೂಪವಾಗಿ ಈ ಗುಂಪಿನ ೧೪ ಸಾಮಗಾನಗಳು ವ್ರತಶಬ್ದಯುಕ್ತವಾಗಿಲ್ಲ.

ಆರಣ್ಯ ಗೇಯಗಾನದ ೨೫೧-೨೯೦ ಪೂರ್ತ ೪೦ ಸಾಮಗಾನಗಳ ಸಮೂಹಕ್ಕೆ **ಶುಕ್ರಿಯ** ಪರ್ವವೆಂಬ ಅಭಿಧಾನವಿದೆ. ಆರಿಹೋಗುತ್ತಿರುವ ಅಗ್ನಿಗೆ ಕಟ್ಟಿಗೆ ಹಾಕಿ ಚೆನ್ನಾಗಿ ಉರಿಸುವಂತೆ ತೃತೀಯ ಸವನದಲ್ಲಿ ರಸಕ್ಕಾಗಿ ಉಪಯೋಗಿಸುವ ಹಿಂಡಿರುವ ಸೋಮಲತೆಯ ಚರಟದಲ್ಲಿ ರಸವನ್ನು ಹೆಚ್ಚಿಸಲು ತ್ರಿಷ್ಟುಪ್ ಛಂದಸ್ಸಿನ ಋಕ್ಕನ್ನು ಪಠಿಸಿ ಮಾಧ್ಯಂದಿನ ಸಂಬಂಧವನ್ನು ಕಲ್ಪಿಸುವುದಕ್ಕೆ ಶುಕ್ರಿಯಂ ಎಂದು ಹೆಸರು. ಆರಿ ಹೋಗಿರುವುದನ್ನು ಪುನಃ ಉದ್ದೀಪನಗೊಳಿಸುವುದೆಂದರ್ಥ. ತೈ.ಸಂ. ೬-

೧-೬, ೨-೩-೪ **ಅತ್ರಶ್ರೂಯಮಾಣಾನಾಂ ಸಾಮ್ನಾಂ ಶುಕ್ರ-ಆದಿತ್ಯ ದೇವತಾತ್ಮಕತ್ವಾತ್** ತಥಾ ವ್ಯವಹಾರಃ. ಈ ಸಾಮಗಾನಗಳಲ್ಲಿ ಹೆಚ್ಚಿನವು ಸೂರ್ಯದೇವಾತ್ಮಕವಾಗಿ ರುವುದರಿಂದಲೂ ಆದಿತ್ಯಾತ್ಮಾ ಚಕ್ಷುಸ್ಸಾಮ ಶ್ರೋತ್ರಸಾಮ ವಾಕ್‌ಸಾಮ ಜಿಹ್ವಾಸಾಮ ಇತ್ಯಾದಿ ಆದಿತ್ಯಾವಯವಗಳ ಅಭಿಧಾನದಲ್ಲಿರುವುದರಿಂದಲೂ ಶುಕ್ರಿಯ ಶಬ್ದವು ಅಗ್ನಿಗೇ ಪ್ರಸಿದ್ಧವಾಗಿದ್ದರೂ ಅಗ್ನಿ ಮತ್ತು ಸೂರ್ಯರ ತೇಜಸ್ಸಿನ ಸಾಮಾನ್ಯತೆಯಿಂದಲೂ ಈ ಸಾಮಗಾನಗಳ ಸಮೂಹಕ್ಕೆ ಶುಕ್ರಿಯಪರ್ವವೆಂಬ ಹೆಸರು ಅನ್ವರ್ಥವಾಗಿದೆ. ಈ ಭಾಗದ ಕೆಲವೆಡೆಗಳಲ್ಲಿ ಎರಡೆರಡು ಅಥವಾ ಮೂರು ಮೂರು ಋಚೆಗಳಿಂದ ಒಂದೊಂದು ಸಾಮಗಾನ ಉದಯವಾಗಿರುವುದನ್ನು ಗಮನಿಸಿ. ಇವನ್ನು ಸ್ತೋಮದ – ಪ್ರಕೃತಿ ಎಂದು ಪರಿಗಣಿಸಲಾಗಿದೆ.

ಪೂರ್ವಾಚಿಕದ ೬೪೧ರಿಂದ ೬೫೦ ಹತ್ತು ಋಕ್‌ಗಳು **ಮಹಾನಾಮ್ನ್ಯಾರ್ಚಿಕಃ** ಎಂಬ ವಿಶಿಷ್ಟ ನಾಮಧೇಯದಿಂದ ಪ್ರತ್ಯೇಕ ಅಸ್ತಿತ್ವವನ್ನೇ ಪಡೆದಿವೆ. ಮಹದಧಿಕಮ್ ನಾಮ ಯಾಸಾಮಪಾಂ ತಾ ಮಹಾನಾಮ್ನ್ಯಃ । ಆಪ್ನೋತಿ ಧಾತೋರುತ್ಪನ್ನಸ್ಯಾಪ್ಯಬ್ದಸ್ಯ ಸರ್ವಫಲಪ್ರಾಪ್ತಿವಾಚಕತ್ವಾನ್ಮಹಾನಾಮತ್ವಮ್ । ಮಹಾ ಮಾನಾ ಅಧಿಕಪೂಜಾಯುಕ್ತಾಃ । ಸರ್ವಕರ್ಮಸು ಶುದ್ಧಿಹೇತುತ್ವೇನಾಧಿಕ ಪೂಜ್ಯತ್ವಮ್ ॥ ತೈ.ಆ. ೧-೧ ಸಾ.ಭಾ ॥ ಈ ಪರ್ವದಲ್ಲಿ ಒಟ್ಟು ನಾಲ್ಕು ಸಾಮಗಾನಗಳಿವೆ. ಈ ಭಾಗದ ಪ್ರಥಮ ಒಂಬತ್ತು ಋಕ್‌ಗಳಲ್ಲಿನ ತೃಚೆ ಎನಿಸಿಕೊಳ್ಳುವ ಮೂರು ಋಕ್‌ಗಳಿಂದ ಒಂದೊಂದು ಸಾಮಗಾನದಂತೆ ಒಟ್ಟು ಮೂರು ಸಾಮಗಾನಗಳು ಉದಯವಾಗಿ ಇವೂ ಕೂಡ ಸ್ತೋಮದ ಪ್ರಕೃತಿ ಎನಿಸಿಕೊಂಡಿವೆ. ನಾಲ್ಕನೆಯ ಸಾಮಗಾನವು ಪುರೀಷ ಪದವೆನಿಸಿರುವ ಐದು ಋಕ್‌ಪದಗಳಿಂದ ವಿಶಿಷ್ಟ ರೀತಿಯಲ್ಲಿ ಸಂಯೋಜನೆಗೊಂಡು ಪುರೀಷಸಾಮವೆಂದು ಹೆಸರನ್ನು ಪಡೆದಿದೆ. ಸಪ್ತಗಾನಾತ್ಮಕವಾದ ಪ್ರಕೃತಿಗಾನದಲ್ಲಿ ಏಳನೆಯದಾದ ಈ ಮಹಾನಾಮ್ನೀಗಾನಗಳಿಗೆ ಆಧಾರಭೂತವಾದ ಋಕ್‌ಗಳು ಶಕ್ವರೀ ಛನ್ದಸ್ಸಿನಲ್ಲಿರುವುದರಿಂದ ಈ ಗಾನಗಳು ಶಕ್ವರ್ಯಃ ಎಂಬ ಅಭಿಧಾನದಿಂದಲೂ ವ್ಯವಹೃತವಾಗಿವೆ. ಇವುಗಳ ನಂತರ ಪಠಿತವಾಗಿರುವ ಶಂಯಾದಪತ್ಯಃ ಹಾಗೂ ಭಾರುಂಡ ಸಾಮಗಾನಗಳು ಅರಣ್ಯ ಪರಿಶಿಷ್ಟಗಳೆಂದು ವ್ಯವಸ್ಥಿತವಾಗಿವೆ.

ಈ ಅರಣ್ಯ ಪರ್ವದಲ್ಲಿ ಪಠಿತವಾಗಿರುವ ೨೨ ಸ್ತೋಭಗಾನಗಳ ಪದಸ್ತೋಭ ವಾಕ್ಯಸ್ತೋಭಗಳಿಗೆ ಮಾತ್ರ ಶ್ರೀ ಶೋಭಾಕರಭಟ್ಟರೆಂಬುವರು – ಸಾಮವೇದ ಪರಿಚಯ ಪುಟ ೧೯ – ಮಾಡಿರುವ ಭಾಷ್ಯವನ್ನೂ ಆಯಾಗಾನಗಳಡಿಯಲ್ಲಿ ಅಳವಡಿಸಿ ಕನ್ನಡದಲ್ಲಿ ಭಾವಾನುವಾದವನ್ನೂ ಕೊಡಲಾಗಿದೆ. ಈ ವಿಶೇಷ ಪದಗಳ ಬಗೆಗೆ ಕೋಶಕಾರರೂ ನಿರುಕ್ತಕಾರರೂ ಹೆಚ್ಚಿನ ಬೆಳಕನ್ನೇನೂ ಚೆಲ್ಲದಿರುವುದರಿಂದ ಆಸಕ್ತ ಸಂಶೋಧಕರು ಈ ದಿಶೆಯಲ್ಲಿ ಗಮನಹರಿಸಬಹುದಾಗಿದೆ.

ಆರಣ್ಯಕದ ವಿಷಯವು ಅಧ್ಯಾತ್ಮದ ಬಗೆಗೇ ಇದೆ. ಇಲ್ಲಿರುವ ಮನ್ತ್ರಗಳು ಸೂರ್ಯ ಅಗ್ನಿ ಇನ್ದ್ರ ವಾಯು ಮುಂತಾದ ದೇವತೆಗಳ ಗುಣಗಣಗಳನ್ನು ಪರಿಪರಿ

ಯಾಗಿ ಸ್ತುತಿಸುತ್ತಿದ್ದರೂ ಅವನ್ನು ಏಕದೇವತಾತ್ಮಕವಾದುದೆಂದೂ ದೇವತೆಗಳ ಈ ಗುಣ ಧರ್ಮಗಳನ್ನು ಸಾಧಕನು ತನ್ನಲ್ಲಿಯೇ ಅಳವಡಿಸಿಕೊಂಡು ಉಳಿಸಿ ಬೆಳೆಸಿ ಈ ಗುಣಗಳ ಗಣಿಯಾದ ಸದ್ವಸ್ತುವೇ ಆಗಬೇಕೆಂಬುದೇ ಅರಣ್ಯಪರ್ವದ ಋಕ್ ಮನ್ತ್ರಗಳ/ಗಾನಗಳ ಆಶಯ. ಇದನ್ನೇ – **ಇನ್ದ್ರಂ ಮಿತ್ರಂ ವರುಣಮಗ್ನಿಮಾಹುಃ ಅಥೋ ದಿವ್ಯಃ ಸಸುಪರ್ಣೋಗರುತ್ಮಾನ್ । ಏಕಂ ಸದ್ವಿಪ್ರಾ ಬಹುಧಾ ವದನ್ತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ ॥** ಋ.ಸಂ. ೧.೧೬೪-೪೬, ಅಥರ್ವ ೯-೧೦-೨೮ ॥ ಎಲ್ಲೆಲ್ಲೂ ಇರುವ ಸದ್ವಸ್ತು ಒಂದೇ. ಅದನ್ನೇ ಜ್ಞಾನಿಗಳು ಅಗ್ನಿ ಆದಿ ವಿವಿಧ ನಾಮರೂಪಗಳಿಂದಲೂ ಅವುಗಳ ಅನನ್ಯ ಗುಣಧರ್ಮಗಳ ಸ್ತುತಿಗಳಿಂದಲೂ ಜನರ ಮನಸ್ಸಿಗೆ ನಾಟುವಂತೆ ವಿಧವಿಧವಾಗಿ ತಿಳಿಸುತ್ತಿರುತ್ತಾರೆ ಈ ಹಿನ್ನೆಲೆಯಲ್ಲಿ ಅರಣ್ಯಪರ್ವದಲ್ಲಿನ ವಿಷಯಗಳನ್ನು ಹೀಗೆ ಸಂಗ್ರಹಿಸಲಾಗಿದೆ.

ಮಾನವನು ಅಜ್ಞಾನದಿಂದಲೇ ಬುದ್ಧಿಯ ಬಂಧನವೆಂಬುದನ್ನು ಅರಿತು ಉತ್ತಮವಾದ ಸತ್ಯಜ್ಞಾನಗಳಿಂದ ಈ ಬಂಧನವನ್ನೂ ವಿಚಾರಹೀನತೆಯಿಂದಲೇ ಮನಸ್ಸಿನ ಬಂಧನವೆಂಬುದನ್ನೂ ಅರಿತು ಸದ್ವಿಚಾರದಿಂದ ಮನೋಬಂಧನವನ್ನೂ ಆಚಾರ ಹೀನತೆಯಿಂದ ಶಾರೀರಿಕ ಬಂಧನವೆಂಬುದನ್ನೂ ಅರಿತು ಸದಾಚಾರದಿಂದ ಶಾರೀರಿಕ ಬಂಧನವನ್ನೂ ಪುರುಷಪ್ರಯತ್ನಪೂರ್ವಕವಾಗಿ ಪರಾಕ್ರಮದಿಂದ ಕಿತ್ತೊಗೆದು ಪಾಪ ರಹಿತರಾಗಿ ಅಖಂಡವಾದ ಅವಿನಾಶಿಯಾದ ಮೋಕ್ಷ ಸಾಮ್ರಾಜ್ಯವನ್ನು ತನ್ನದನ್ನಾಗಿ ಮಾಡಿ ಕೊಳ್ಳಬೇಕು. ಜೀವನದ ಸ್ಪರ್ದೆಯಲ್ಲಿ ಆಲಸ್ಯ ರಹಿತವಾದ ಸತತ ಪ್ರಯತ್ನದೊಂದಿಗೆ ದೈವೀಸಹಾಯವನ್ನು ಪಡೆದು ಗೆಲ್ಲುವುದೇ ಜನುಮದ ಆದ್ಯ ಕರ್ತವ್ಯವಾಗಿರುತ್ತದೆ. ದೇವತೆಗಳಿಗೆ ಒಳ್ಳೆಯದೆನಿಸದ ಯಾವ ಮಾತುಗಳನ್ನು ಆಡದಿರುವುದೇ ವಾಕ್‌ಶುದ್ಧಿಯ ದಾರಿಯಾಗಿದ್ದು ಈ ವಾಕ್ ಶುದ್ಧಿಯಿಂದಲೇ ಬಹುತೇಕ ಕಾಮನೆಗಳನ್ನು ಈಡೇರಿಸಿಕೊಳ್ಳಬಹುದಾಗಿದೆ. ದೇವತೆಗಳ ಗುಣಧರ್ಮಗಳನ್ನೇ ನಮ್ಮಲ್ಲಿ ರೂಢಿಸಿಕೊಂಡು ಶುಭಕರ್ಮಗಳಿಂದ ಅವುಗಳನ್ನು ಪೋಷಿಸುತ್ತಾ ಅನುಷ್ಠಾನ ಮಾಡುವುದೇ ಮಾನವನ ಪರಮ ಶ್ರೇಷ್ಠವಾದ ಕರ್ತವ್ಯವಾಗಿದೆ. ದೈವೀಗುಣಸಂಪನ್ನರಾಗಿ ಅಂತರ್ಯದಲ್ಲಿ ಇಷ್ಟದೇವತಾಸಾನ್ನಿಧ್ಯವನ್ನನುಭವಿಸುತ್ತಾ ಆನಂದವಾಗಿರುವುದೇ ಉನ್ನತಿಗೇರುವ ಉಪಾಯವಾಗಿದೆ. ಉಚ್ಚಸ್ಥಿತಿಗೇರಿ ದ್ಯುಲೋಕದಿಂದ ಉತ್ತಮವಾದ ಅನ್ನವನ್ನೂ ಸ್ವರ್ಗದಿಂದ ಉತ್ತಮಭೋಗವನ್ನೂ ಪಡೆಯುವುದೇ ಅಮರತ್ವ. ಇದಕ್ಕೆ ಉತ್ತಮ ಮಾರ್ಗವನ್ನು ತೋರಿಸುವ ಋಷಿಸದೃಶ ಕವಿಗಳು ದ್ರಷ್ಟಾರರು ಮಾಡುವ ದೇವತಾ ಸ್ತುತಿಗಳ ಅರ್ಥಗಳನ್ನು ಸಾಧಕರು ಸಾವಧಾನವಾಗಿ ಮನನಮಾಡಿಕೊಳ್ಳುತ್ತಾ ಸ್ತುತಿಸಬೇಕು ಧ್ಯಾನಮಾಡಬೇಕು. ಸಹಸ್ರಶೀರ್ಷಾ ಮನ್ತ್ರಗಳು ವಿವರಿಸುವಂತೆ ಸಮಸ್ತಮಾನವರೂ ಸ್ಪರ್ಧಾರಹಿತರಾಗಿ ಪರಸ್ಪರ ಪೂರಕವಾಗಿ ಆಲೋಚಿಸಿ ಅನುಷ್ಠಾನಮಾಡುವುದೇ ಪ್ರಪಂಚದ ಕಲ್ಯಾಣ ಬಯಸುವವರ ಶಾಂತಿಸ್ಥಾಪಿಸುವವರ ದಾರಿಯಾಗಿದೆ.

ಸ್ಥಾವರ ಜಂಗಮಗಳ ಒಡೆಯನಾದ ತೇಜಸ್ವಿಯೂ ಮಹಾಬಲಶಾಲಿಯೂ ಐಶ್ವರ್ಯವಂತನೂ ದಾನಶೂರನೂ ಆದ ಇನ್ದ್ರನನ್ನು ಸ್ತುತಿಸುವುದರಿಂದ ಅಪರಿಮಿತ ಬಲ ಪರಾಕ್ರಮಗಳನ್ನೂ ಶ್ರೇಷ್ಠವಾದ ತೃಪ್ತಿ ನೀಡುವ ಅನ್ನವನ್ನೂ ಬಹುಪ್ರಶಂಸಿತವಾದ ರಮಣೀಯವಾದ ಪ್ರೇರಣಾದಾಯಕವಾದ ಭೋಗಿಸಲೂ ದಾನಮಾಡಲೂ ಯೋಗ್ಯವಾದ ಗೋಧನ ಸಂಪತ್ತನ್ನೂ ಪಡೆಯೋಣ. ಪವಿತ್ರವಾದ ಅವನ ಸಹಾಯದಿಂದ ಸದಾ ಸರ್ವದಾ ನಮ್ಮ ಪಾಲಿಗೆ ಬಂದಿರುವ ಕೆಲಸಗಳನ್ನು ಸಾವಧಾನದಿಂದ ಜಾಗರೂಕತೆಯಿಂದ ಸಮಾಧಾನ ಸಂತೋಷಗಳಿಂದ ನಿರ್ವಹಿಸೋಣ. ಸ್ಥಾವರ ಜಂಗಮ ಜಗತ್ತಿನ ಆತ್ಮನಾಗಿರುವ ಸೂರ್ಯಭಗವಂತನು ನಿಷ್ಪಕ್ಷಪಾತನಾಗಿ ಸಮಸ್ತರನ್ನೂ ಸಮಸ್ತವನ್ನೂ ಪ್ರಕಾಶಿಸುವವನೂ ರಕ್ಷಿಸುವವನೂ ದುಃಖದಿಂದ ಪಾರುಮಾಡುವವನೂ ಆಗಿದ್ದಾನೆ. ಸೂರ್ಯನು ತನ್ನ ಪವಿತ್ರಕಾರಕವಾದ ಕಿರಣಗಳ ಏಳು ಬಣ್ಣಗಳಿಂದ ಕಂಗೊಳಿಸುತ್ತಾ ಸಪ್ತಾಶ್ವರಥಾರೂಢನಾಗಿ ಮನುಷ್ಯನಿಗೆ ಪ್ರಪಂಚವನ್ನು ತೋರಿಸಬೇಕೆಂದು ಪ್ರತಿದಿನವೂ ಉದಯವಾಗುತ್ತಾನೆ. ಮಹಾಮಹಿಮನಾದ ಸಮಸ್ತರಿಗೂ ದರ್ಶನ ಯೋಗ್ಯನಾದ ಸೂರ್ಯಭಗವಂತನು ತನ್ನ ತೀಕ್ಷ್ಣವಾದ ಕಿರಣಗಳಿಂದ ಮಾನವನ ಒಳಗನ್ನೂ ಹೊರಗನ್ನೂ ವೀಕ್ಷಿಸುತ್ತಾ ಪರೀಕ್ಷಿಸುತ್ತಿರುತ್ತಾನೆ ಹಾಗೂ ವಾಯುವಿನೊಂದಿಗೆ ಸೇರಿ ಸಮಸ್ತ ಅನ್ನವನ್ನೂ ಮಾಗಿಸುತ್ತಾ ಪೂರ್ಣಗೊಳಿಸುತ್ತಾ ಜಗತ್ತನ್ನು ಪೋಷಿಸುತ್ತಾ ಸಂರಕ್ಷಿಸುತ್ತಿರುತ್ತಾನೆ.

ಯಾವುದರಿಂದ ಮನುಷ್ಯನು ಧನ್ಯನಾಗುತ್ತಾನೋ ಅದೇ ಧನ. ಮನ್ತ್ರ ಮನೆ ಮಡದಿ ಮಗ ಧನ ಧಾನ್ಯ ಗೋ ಆದಿ ಸಂಪತ್ತನ್ನು ಪಡೆಯಲು ಬೇಕಾದ ಶಕ್ತಿ ಸಾಹಸ ಪರಾಕ್ರಮ ಸಾಮರ್ಥ್ಯಗಳನ್ನು ಭಗವಂತನೇ ಕೃಪೆ ಮಾಡಿ ಅನುಗ್ರಹಿಸು. ಮಹಾ ಧನವಂತನೂ ಮಹಾಮಹಿಮನೂ ಬಲಶಾಲಿಯೂ ಆದ ಇನ್ದ್ರನೇ ನಮ್ಮನ್ನು ಹಿರಣ್ಯಾದಿ ತೇಜೋಮಯವಾದ ಸಂಪತ್ತನ್ನುಳ್ಳವರಾಗಿಯೂ ಗೋ ಆದಿ ಪಶುಗಳ ಒಡೆಯರನ್ನಾಗಿಯೂ ನಿಷ್ಪಾಪರಾನ್ನಾಗಿಯೂ ಸತ್ಯಜ್ಞಾನಯುತರನ್ನಾಗಿಯೂ ಯಜ್ಞ ಮಾಡಲೂ ಭೋಗಪಡಲೂ ಅನುಕೂಲವಾದ ದೀರ್ಘಾಯುಸ್ಸುಳ್ಳವರನ್ನಾಗಿಯೂ ಮಾಡು. ನಿನ್ನ ಅನುಗ್ರಹದಿಂದಲೂ ನಮ್ಮ ಪುರುಷಪ್ರಯತ್ನದಿಂದಲೂ ರೂಢಿಸಿಕೊಂಡ ಸಂಪತ್ತನ್ನೂ ಜ್ಞಾನವನ್ನೂ ದೀರ್ಘಾಯುಸ್ಸನ್ನೂ ರಕ್ಷಿಸಿಕೊಳ್ಳಬೇಕಾದ ತೇಜಸ್ಸನ್ನೂ ಬಲಶೌರ್ಯ ಸಾಹಸ ಸಾಮರ್ಥ್ಯಗಳನ್ನೂ ಅನುಗ್ರಹಿಸು. ಯುದ್ಧಗಳಿಂದ ರಕ್ಷಿಸು. ವೃತ್ರನನ್ನು ಸಂಹರಿಸಲೆಂದೇ ಉದಯವಾಗಿರುವ ಮಹಾಮಹಿಮನಾದ ಇನ್ದ್ರನ ಚಿರಂತನವಾದ ಸ್ಥಾಯಿಯಾದ ಬಲ ಪೌರುಷ ಸಾಹಸ ಪರಾಕ್ರಮ ಸಾಮರ್ಥ್ಯಗಳನ್ನು ಅವನ ಅನುಗ್ರಹದಿಂದ ನಮ್ಮದನ್ನಾಗಿಮಾಡಿಕೊಂಡು ಶತ್ರುಗಳೊಡನೆ ಯುದ್ಧಮಾಡಿ ವಿಜಯ ಪಡೆಯೋಣ. ಶಕ್ತಿಯ ಆಗರವೇ ಆಗಿರುವ ಸದಾ ವಿಜಯಶಾಲಿಯೇ ಆಗಿರುವ ಇನ್ದ್ರನೇ ಅಭ್ಯುದಯದ ಸಮಸ್ತ ಮಾರ್ಗಗಳನ್ನೂ ತಿಳಿದಿರುವ ನೀನು ಉತ್ತಮ ತಿಳುವಳಿಕೆಯನ್ನು ನೀಡಿ ದೋಷರಹಿತವಾದ ಮಾರ್ಗದಲ್ಲಿ ಮುಂದುವರೆಯುವಂತೆ ಪ್ರೇರಿಸು. ನಾವು ಪಾಪ ರಹಿತರು ಶ್ರೇಷ್ಠರು ಮಹಾಮಹಿಮರು ಅದ್ವಿತೀಯರು ಶಕ್ತಿವಂತರು ಈ ಸಂಪತ್ತನ್ನು ಯಶಸ್ವಿಯಾಗಿ ಪಡೆಯುವವರು ಈ ಸಭೆಯಲ್ಲಿ

ಉತ್ತಮವಾಗಿ ಲೋಕ ಕಲ್ಯಾಣಾಕಾಂಕ್ಷಿಯಾಗಿ ಪ್ರಭಾವ ಬೀರುವಂತೆ ಸಂಭಾಷಿಸುವವರು ಎಂಬ ಅಸ್ಮಿತೆಯ ಪ್ರೇರಣೆಯನ್ನುಂಟು ಮಾಡಬೇಕೆಂದು ಅದಿತಿ ಅಗ್ನಿ ಪೃಥಿವೀ ಸಿನ್ಧು ಆದಿ ಸಮಸ್ತ ದೇವ ದೇವತೆಗಳನ್ನೂ ಪ್ರಾರ್ಥಿಸುತ್ತೇವೆ. ಸಾವಿರ ಶಿರ ಪಾದ ಕಣ್ಣುಗಳುಳ್ಳ ಪುರುಷನು ಪಾದಾಂಶದಿಂದ ಈ ಜಗತ್ತನ್ನು ವ್ಯಾಪಿಸಿ ತಿನ್ನುವ ಹಾಗೂ ತಿನ್ನದಿರುವ ವಿವಿಧ ನಾಮ ರೂಪಗಳಲ್ಲಿ ಪ್ರಕಟವಾಗಿರುವುದೇ ಅವನ ಮಹಿಮೆಯಾಗಿದೆ. ಪೂರ್ಣತೆಯೇ ಸದಾ ಪ್ರಶಂಸನೀಯವಾದದ್ದು. ಶಕ್ತಿಶಾಲಿಯಾದವನೇ ಸಾಮರ್ಥ್ಯ ವಂತನೇ ಶಾಸಕನಾಗಿ ಎಲ್ಲವನ್ನೂ ಎಲ್ಲರನ್ನೂ ತನ್ನ ಹತೋಟಿಯಲ್ಲಿಟ್ಟುಕೊಳ್ಳಬಲ್ಲನು. ವಿಜಯಿಯೂ ಅಪರಾಜಿತನೂ ಆದ ವೀರನನ್ನೇ ಲೋಕವು ತನ್ನ ರಕ್ಷಣೆಗಾಗಿ ಆಶ್ರಯಿಸುತ್ತದೆ. ಧನ ಮತ್ತು ಅನ್ನ ಸಂಪಾದನೆಯಲ್ಲಿ ಸಾಮರ್ಥ್ಯ ಉಳ್ಳವನೇ ಶೂರರಲ್ಲೇ ಶೂರನೂ ಬಲಿಷ್ಠರಲ್ಲೇ ಬಲಿಷ್ಠನೂ ಆದವನೇ ತನ್ನ ವಶದಲ್ಲಿರುವವರನ್ನೂ ಸಾಮರ್ಥ್ಯ ವಂತರನ್ನಾಗಿ ಮಾಡಬಲ್ಲನು. ಸತ್ಯನಿಷ್ಠನೂ ಕರ್ಮನಿರತನೂ ವೀರನೂ ಅಪರಾಜಿತನೂ ಸಾಮರ್ಥ್ಯಶಾಲಿಯೂ ಆದ ಮಹಿಮಾವಂತನೇ ರಕ್ಷಕನೂ ಒಡೆಯನೂ ಆಗುತ್ತಾನೆ. ದೇವತೆಗಳಿಗಿಂತ ಮೊದಲೇ ಅಮರತ್ವವನ್ನೀಯುವ ಯಜ್ಞಗಳಿಗೆ ಪೂರ್ವದಲ್ಲೇ ಅನ್ನದ ಉತ್ಪತ್ತಿಯಾಯಿತು. ಅನಂತರ ಅನ್ನವನ್ನು ತಿನ್ನುವವರು ಉದಯವಾದರು. ಅನ್ನವನ್ನು ಹಸಿದವರಿಗೆ ಅನ್ಯರಿಗೆ ದಾನಮಾಡಿ ದನಂತರ ಬೋಜನಮಾಡುವವನ ಸಂರಕ್ಷಣೆಯು ಸ್ವಾಭಾವಿಕವಾಗಿ ತಾನಾಗಿಯೇ ಆಗುತ್ತದೆ. ಅನ್ನವನ್ನು ದಾನ ಮಾಡದೆ ತನ್ನಷ್ಟಕ್ಕೆ ತಾನು ಭೋಜನಮಾಡುವ ಲೋಭಿಯನ್ನು ಸಂರಕ್ಷಣೆಯನ್ನೇಮಾಡದಂತೆ ಅನ್ನವೇ ತಿಂದು ಬಿಡುತ್ತದೆ. ಆಜ್ಞಾ ಮಾತ್ರದಿಂದ ತಮ್ಮಷ್ಟಕ್ಕೆ ತಾವೇ ತಮ್ಮನ್ನು ರಥಕ್ಕೆ ಹೂಡಿಕೊಳ್ಳುವ ಹರಿ ಎಂಬ ಹೆಸರಿನ ಕುದುರೆಗಳು ಇನ್ದ್ರನ ಮಿತ್ರರು ನಿಯುತ ಎಂಬ ಹೆಸರಿನ ಕುದುರೆಗಳು ವಾಯುವಿನ ಮಿತ್ರರು. ಹಗಲಿನ ಪ್ರಕಾಶವನ್ನು ತಡೆದು ಜಗತ್ತಿಗೆ ವಿಶ್ರಾಂತಿ ಯನ್ನನ್ನುಗ್ರಹಿಸುವ ಕಲ್ಯಾಣಕಾರಕಳಾದ ರಾತ್ರೀ ದೇವತೆಯು ಜಗತ್ತಿನ ಮಿತ್ರಳು.

ಸಮಸ್ತವಾದ ಆರೂ ಋತುಗಳೂ ಎಲ್ಲಾ ಕಾಲವೂ ರಮಣೀಯವೂ ಸುಖ ದಾಯಕವೂ ಆಗಿರುವುದರಿಂದ ಕಾಲವನ್ನು ಎಂದೂ ದೂಷಿಸಬಾರದು. ದೋಷ ವಿರುವುದು ನಮ್ಮ ಪ್ರಯತ್ನದಲ್ಲೇ ಎಂಬುದನ್ನರಿತು ದೋಷರಹಿತವಾದ ಯಥಾ ಯೋಗ್ಯವಾದ ಪ್ರಯತ್ನವನ್ನು ಸತತವಾಗಿ ಸಿದ್ಧಿದೊರಕುವವರೆಗೆ ಮಾಡುತ್ತಲೇ ಇರಬೇಕು ಎಂಬರ್ಥದಲ್ಲೇ ಮನುಷ್ಯನಿಗೆ **ಕ್ರತು** ಎಂದಿರುವುದು. ಜೀವನ ಕ್ರತು ಯಜ್ಞ ರೂಪವಾಗಿರಬೇಕು. **ಸಃ ಕ್ರತುಃ ಛನ್ದಃ ಋತಂ ಬೃಹತ್** ಸಾ.ಋ.೬೪೬ ॥ ಅವನು ಕರ್ಮ ನಿರತನೂ ರಕ್ಷಕನೂ ಸತ್ಯನಿಷ್ಠನೂ ಮಹಾಮಹಿಮನೂ ಆಗಿದ್ದಾನೆ. **ಕ್ರತುಃ** – ನಿಶ್ಚಯ ಶಕ್ತಿ ಬುದ್ಧಿ ಯಜ್ಞ ಅನ್ತಃಪ್ರಕಾಶ ಪ್ರಜ್ಞಾ ॥ **ಛನ್ದಃ** – ಆನಂದ ಇಚ್ಛಾ ನಿಶ್ಚಯ ತತ್ಪರತಾ ॥ **ಋತಂ** – ಯೋಗ್ಯ ಸತ್ಯ ಸಾಮರ್ಥ್ಯ ಶೂರ ಪೂಜ್ಯ ತೇಜಸ್ವೀ ನಿಯಮ. **ಬೃಹತ್** – ಉಚ್ಚ ಮಹಾನ್ ದೊಡ್ಡ ಹೆಚ್ಚು ಸಾಮರ್ಥ್ಯಶಾಲಿ. ಈ ಎಲ್ಲಾ ಅರ್ಥಗಳೂ ಕರ್ಮ ನಿಷ್ಠರೂ ಸತ್ಯವಂತರೂ ಪುರುಷಾರ್ಥ ಪರಾಕ್ರಮಿಗಳೂ ಆದ ಸಾಧಕರಿಗೆ ಮಾರ್ಗದರ್ಶಿಯಾಗಿವೆ.

ಉತ್ತರಾರ್ಚಿಕ, ಊಹಗಾನಗಳು ಮುಂದಿನ ಸಂಪುಟಗಳಲ್ಲಿ ಪ್ರಕಟವಾಗುತ್ತದೆ.

ಅಸ್ತು ಶ್ರೌ ಷಟ್ ಸಾಋು ೪೯೧..
ನಾ ಮಾಡುತ್ತಿರುವ ಸ್ತುತಿ ದೇವತಗಳಿಗೆ ಕೇಳಿಸುವಂತಾಗಲಿ

ಕಾಣದೂರಿನಿಂದಾಹ್ವಾನ ಬಂದಿದೇ ಬಂದಿದೇ
ಬಿಳಿಮುಗಿಲ ದಾಟಿದರೆ ತಾರೆಗಳ ಮೀಂಟಿದರೆ ಸಿಗಬಹುದಾದೂರಿಗೆ
ಎದೆತುಂಬ ನಕ್ಷತ್ರಗಳ ತುಂಬಿಕೊಂಡು ಮೌನದಲಿ ಮಾತ ಹುಡುಕುತ್ತಾ
ತೆರುಳುತಿಹೆನಿಂದಲ್ಲಿಗೆ !

# ಓಮ್ ತತ್ಸತ್

## ದ್ರಾಹ್ಯಾಯಣ ಪ್ರತಿಷ್ಠಾನದ ಪ್ರಕಟಣೆಗಳು

| | |
|---|---|
| ೧. ಸಾಮವೇದ ಪರಿಚಯ (ಪುರ್ನಮುದ್ರಣ) | ೧೦೦/- |
| ೨. ಸಾಮವೇದ ಸಂಧ್ಯಾನುಷ್ಠಾನವಿಧಿ (ಪುರ್ನಮುದ್ರಣ) | ೭೫/- |
| ೩ ನಿತ್ಯಾಹ್ನಿಕ ಉಪಾಕರ್ಮ(ಪುರ್ನಮುದ್ರಣ) | ೧೫೦/- |
| ೪. ಸಾಮವೇದ ಪೂರ್ವಪ್ರಯೋಗ | ೨೦೦/- |
| ೫. ಸಾಮವೇದ ಶ್ರಾದ್ಧಪ್ರಯೋಗ(ಪುರ್ನಮುದ್ರಣ) | ೧೦೦/- |
| ೬. ಅಪರ ಪ್ರಯೋಗ (ಪುರ್ನಮುದ್ರಣ) | ೧೫೦/- |
| ೭. ಸಾಮವೇದ ಸಂಹಿತಾ : ಋಕ್-ಪದ-ಗಾನ ಸಾಯಣ ಭಾಷ್ಯ ಕನ್ನಡ ಭಾವಾನುವಾದ - ಪದ್ಯಾನುವಾದ ಸಹಿತ : ಆಗ್ನೇಯ ಕಾಂಡಮ್ - ಸಂಪುಟ-೧ | ೨೨೦/- |
| ಐನ್ದ್ರಕಾಂಡಮ್ - ಸಂಪುಟ-೨, ೩ | ೨೫೦/- |
| ಪಾವಮಾನಕಾಂಡಮ್ - ಸಂಪುಟ-೪ | ೨೫೦/- |
| ಆರಣ್ಯಕಾಂಡಮ್ - ಸಂಪುಟ-೫ | ೨೫೦/- |
| ೮. ಸಾಮಗಾನನಾಮ, ಋಷಿ, ಛನ್ದಸು, ದೇವತೆಗಳು | ೩೦೦/- |
| ೯. ಋಕ್ ಮತ್ತು ಸಾಮಗಾನ ಸಂಗ್ರಹ | ೩೫೦/- |
| ೯. ನಾರದೀಯ ಶಿಕ್ಷಾ | ಮುದ್ರಣದಲ್ಲಿ |
| ೧೦.ಸಾಮವೇದ ಗೃಹ ಪ್ರವೇಶ ಪ್ರಯೋಗ | ಮುದ್ರಣದಲ್ಲಿ |

## ಪುಸ್ತಕ ದೊರೆಯುವ ಸ್ಥಳಗಳು

| | ದೂರವಾಣಿ |
|---|---|
| ೧. ದ್ರಾಹ್ಯಾಯಣ ಪ್ರತಿಷ್ಠಾನ ನಂ ೮೦೧, ೩ನೆಯ ಮುಖ್ಯ ರಸ್ತೆ, ೪ನೆಯ ಬ್ಲಾಕು, ರಾಜಾಜಿನಗರ, ಬೆಂಗಳೂರು-೧೦ | ೨೩೧೫೩೨೪೮ |
| ೨. ಬಿ.ಎನ್.ನಾಗರಾಜು, ಬೆಂಗಳೂರು | ೨೬೭೨೨೬೦೩ |
| ೩. ಕೆ.ಎಲ್.ರಾಮಸ್ವಾಮಿ, ಮೈಸೂರು, | ೯೫೩೮೯೭೦೦೦೭ |
| ೪. ವೇದಾಂತ ಬುಕ್ ಹೌಸ್, ಬೆಂಗಳೂರು | ೨೬೫೦೭೯೯೦ |
| ೫. ಕಡಬಾ ಸುಬ್ರಹ್ಮಣ್ಯ, ಬೆಂಗಳೂರು | ೨೩೩೨೨೬೩೨/೯೭೩೯[illegible]೦೪೩೫ |
| ೬. ಗೀತಾ ಪ್ರಭಾಕರ -ಮೈಸೂರು | ೦೮೨೧೪೨೪೩೯೫೯ |
| ೭. ಶ್ರೀ ಕೌಶಿಕ - ಹೊಸನಗರ ತಾಲ್ಲೂಕು | ೦೮೧೮೫೨೫೬೧೪೭ |

## ಈ ಗ್ರಂಥ ಕುರಿತು ........

ಸಾಮವೇದದ ತತ್ತ್ವ ಮತ್ತು ಪ್ರಯೋಗಗಳನ್ನು ಒಟ್ಟಾಗಿ ಉಜ್ಜೀವನಗೊಳಿಸುವ ತುಡಿತವೇ ದ್ರಾಹ್ಯಯಣ ಪ್ರತಿಷ್ಠಾನದ ಪ್ರಕೃತೋದ್ಯಮದಲ್ಲಿ ಎದ್ದು ಕಾಣುವ ವಿಶೇಷತೆ.... ಕೃತ್ಸ್ನದೃಷ್ಟಿಯ ರಸಫಲವನ್ನೇ ಪ್ರಕೃತ ಸಾಮವೇದ ಸಂಪುಟಗಳಲ್ಲಿ ಕಾಣಬಹುದು. ಆದುದರಿಂದಲೇ ಇದು ಕರ್ಮ ಜ್ಞಾನ ಉಪಾಸನೆಗಳೆಂಬ ಕಾಂಡತ್ರಯಾಭಿಮಾನಿಗಳಿಗೂ ಸಮಾನವಾಗಿ ಆದರಣೀಯವಾಗಿದೆ.

–ಶತಾವಧಾನಿ ಡಾ|| ಆರ್. ಗಣೇಶ್

ಶಬ್ದಾತೀತನು ಶಬ್ದವೆನಿಸಿದ ವೇದದ ಒಡಲಿನಲ್ಲೇ ಇರುತ್ತಾ ಸಾಮವೇದವು ಶಬ್ದದಾಚೆಯ ಅನುಭವೈಕವೇದ್ಯನಿಗೆ ಹೊಸ್ತಿಲಿನಂತೆ ಇದ್ದು ಶಬ್ದದ ಈಚಿನ ಲೋಕಕ್ಕೂ ಅವನಿಗೂ ಕೊಂಡಿಯಂತಿರುವುದೇ ವಿಶೇಷ. ಇಷ್ಟು ಮುಖ್ಯವಾದ ಸಾಮವೇದ ಸಂಹಿತೆಯ ಈ ಸಂಪುಟಗಳನ್ನು ಹೊರತರುತ್ತಿರುವುದು ಭಗವಂತನ ವಿಶೇಷ ಅನುಗ್ರಹದಿಂದಲೇ. ಈ ಪ್ರೇರಣೆಯೇ ದಿವ್ಯ ಅತಿ ಮಾನುಷ ಋಷಿಪ್ರೇರಿತ...

–ಪ್ರೋ|| ಕೆ.ಎಸ್.ನಾರಾಯಣಾಚಾರ್ಯ

ಸಾಮಗರ ಉಪಕಾರಕ್ಕಾಗಿ ಪ್ರಧಾನವಾಗಿಯೂ ಇತರ ಶಾಖಿಗಳ ಜ್ಞಾನಾಭಿವೃದ್ಧಿಗಾಗಿಯೂ ಪ್ರಸ್ತುತ ಕನ್ನಡದಲ್ಲಿ ಪ್ರಥಮವಾಗಿ ಪ್ರಕಾಶವಾಗುತ್ತಿರುವ ಸಾಮವೇದ ಸಂಹಿತೆಯು ಸಮಗ್ರವಾದ ಸ್ವರಸಹಿತ ಋಕ್, ಪದಪಾಠ, ಗಾನಕ್ರಮ ವಿನ್ಯಾಸಗಳೊಂದಿಗೂ ಸಾಯಣಭಾಷ್ಯ ಪ್ರತಿಪದಾರ್ಥ ಭಾವಾನುವಾದ,ಪದ್ಯಾನುವಾದಗಳೊಂದಿಗೂ ಹೊರಬರುತ್ತಿರುವುದು ಬಹಳ ಸ್ವಾಗತಾರ್ಹ.

–ವೇದವಾರಿಧಿ ಡಾ|| ಪಿ. ರಾಮಾನುಜನ್